# ಗೀತೆ; ಅಂತರ್ವಾಣಿ





## ...ತೆಯ ಅಂತರ್ವಾಣಿ

"ಅಮರವಾಣಿ"

ಪ್ರಕಾಶಕರು:
ಪ್ರಬೋಧ ಪುಸ್ತಕಮಾಲೆ
ಮೈಸೂರು
೧೯೫೮

# ಗೀತೆ; ಅಂತರ್ವಾಣಿ
(Geeta is the Inner voice)

ಮತ್ತು

# ಗೀತೆಯ ಅಂತರ್ವಾಣಿ
(Geeta's inner voice)

(ಸಮೂಲ)

(ಆಚಾರ್ಯ ವಿನೋಬ ಅವರ ಶುಭಾಶಯದೊಡನೆ)

ಬರೆದವರು
ಆಸ್ಥಾನ ವಿದ್ವಾನ್
ಎಂ. ಜಿ. ನಂಜುಂಡಾರಾಧ್ಯ.

ಪ್ರಕಾಶಕರು.
ಪ್ರಬೋಧ ಪುಸ್ತಕ ಮಾಲೆ
ವಾಣೀವಿಲಾಸ ರಸ್ತೆ,
ಮೈಸೂರು.

# आशीर्वचन

यह प्रयत्न अच्छा है। गीता का जितना चिंतन मनन हो उतना विश्व के कल्याण का साधन बनेगा। यह मैं ने सरसरी तौर पर देख लिया है। कहीं कहीं सुधार भी सुझाये हैं। वस्तु जनोपयोगी होगी ऐसी मैं आशा करता हूँ।

१६-७-१९५७ विनोबा के प्रणाम.

(लोक नागरी लिपि)
मुकाम-हुणसूर,
जिला-मैसूर.

# ಆಶೀರ್ವಚನ

ಈ ಪ್ರಯತ್ನವು ಚನ್ನಾಗಿದೆ. ಹೆಚ್ಚುಹೆಚ್ಚು ಗೀತೆಯ ಚಿಂತನ, ಮನನಗಳು ವಿಶ್ವಕಲ್ಯಾಣಕ್ಕೆ ಸಾಧನಗಳು. ಇದನ್ನು ನಾನು ವಿಹಂಗಮ ದೃಷ್ಟಿಯಿಂದ ಅವಲೋಕಿಸಿದ್ದೇನೆ. ಅಲ್ಲಲ್ಲಿ ಸಲಹೆ ನೀಡಿದ್ದೇನೆ. ಈ ವಸ್ತು ಜನೋಪಯೋಗಿ ಆಗುವುದೆಂದು ಆಶಿಸುತ್ತೇನೆ.

೧೬-೭-೧೯೫೭ ವಿನೋಬ

ಮುಕ್ಕಾಂ-ಹುಣಸೂರು
ಮೈಸೂರು ಜಿಲ್ಲೆ.

# ಬಿನ್ನಹ

ಭಾರತೀಯ ಸಂಸ್ಕೃತಿಯ ಸೆಲೆ ಭಗವದ್ಗೀತೆ. "ಯಾದೃಶೀ ಭಾವನಾ ಯತ್ರ ಸಿದ್ಧಿರ್ಭವತಿ ತಾದೃಶೀ" ಎಂಬಂತೆ ಗೀತೆಯು ಸುಸಂಸ್ಕೃತ ಮಾನವನ ಅಂತರ್ವಾಣಿಯಾಗಿ ಅವನವನ ಹೃದಯ ಪರಿಪಾಕಕ್ಕೆ ಅನುಗುಣವಾದ ಆಶಯವನ್ನು ಬೋಧಿಸುವುದಾಗಿದೆ.

ಮೈಸೂರು ಗೀತಾಪ್ರಚಾರಣೀ ಸಭೆಯ ಆಶ್ರಯದಲ್ಲಿ ಏರ್ಪಡಿಸಿದ್ದ ಗೀತಾಸಪ್ತಾಹದಲ್ಲಿ ಮಾಡಿದ ನನ್ನ ಭಾಷಣದ ವಿಕಾಸವೇ ಈ ಪುಟ್ಟ ಹೊತ್ತಗೆ. ಭಾಷಣದ ಪೂರ್ವಸಿದ್ಧತೆಯ ಪರಿಚಿಂತನೆಯಲ್ಲಿ ತೊಡಗಿದ ಮನೋಭೂಮಿಕೆಯ ಮೇಲೆ ಹೊಳೆದ ಬೆಳೆ 'ಗೀತೆ; ಅಂತರ್ವಾಣಿ' ಎಂಬುದು!

ತಾ॥ ೨-೧-೫೬ ರ ಸಂಜೆ ನನ್ನ ಭಾಷಣಕ್ಕೆ ದೊರೆತ ಪ್ರೋತ್ಸಾಹ, ಮತ್ತು ಸದರಿ ಸಭೆಯ ಅಧ್ಯಕ್ಷರಾಗಿದ್ದ ಶ್ರೀ ಶ್ರೀ ಪೂಜ್ಯ ಶಂಕರಾನಂದ ಭಾರತೀ ಸ್ವಾಮಿಜಿಯವರ ಅನುಮೋದನೆಯ ಪ್ರತಿಫಲವಾಗಿ ರೂಪುಗೊಂಡುದು ಈ ಕೃತಿ. ಇದರ ಪ್ರಯೋಜನ ಗೀತೆಯ ಭಕ್ತವೃಂದಕ್ಕೆ ಮೀಸಲು. ಕೃತಿಶಿಖರಕ್ಕೆ ಮುನ್ನುಡಿಯ ಕಲಶವನ್ನು ಧರಿಸಿದ ಶ್ರೀಯವರಿಗೂ ಆಶೀರ್ವಚನವನ್ನು ನೀಡಿದ ಆಚಾರ್ಯ ವಿನೋಬ ಅವರಿಗೂ ಮತ್ತು ಈ ಕೃತಿಗೆ ಆಧಾರವಾಗಿ ಸ್ವೀಕರಿಸಿರುವ ಎಲ್ಲ ಗ್ರಂಥಕರ್ತರಿಗೂ ಹೃತ್ಪೂರ್ವಕ ವಂದನೆಗಳು.

ಮೈಸೂರು
೨೭-೬-೧೯೫೮
ಶಯನ್ನೈಕಾದಶೀ, ಶುಕ್ರವಾರ

ಎಂ. ಜಿ. ನಂಜುಂಡಾರಾಧ್ಯ

# ಮುನ್ನುಡಿ

ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನ ವಿದ್ವಾಂಸರಾದ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ರಚಿಸಿರುವ "ಗೀತೆ, ಅಂತರ್ವಾಣಿ" ಮತ್ತು "ಗೀತೆಯ ಅಂತರ್ವಾಣಿ" ಎಂಬ ಎರಡು ಭಾಗಗಳನ್ನೊಳಗೊಂಡಿರುವ ಚಿಕ್ಕ ಪುಸ್ತಕವನ್ನು ಅವರಿಂದಲೇ ಆ ಮೂಲಾಗ್ರವಾಗಿ ಓದಿಸಿ ಕೇಳಿ ನನಗೆ ಬಹಳ ಆನಂದವಾಯಿತು. ನಿಗರ್ವಿಗಳಾಗಿಯೂ ನಿಷ್ಪಕ್ಷಪಾತಿಗಳಾಗಿಯೂ ಇರುವ ಶ್ರೀಯುತರ ಕೃತಿಯು ತುಂಬಾ ಚನ್ನಾಗಿದೆ. ಇದರಲ್ಲಿ ಅನೇಕ ವಿಷಯಗಳು ಅಡಕವಾಗಿವೆ.

ಭಗವದ್ಗೀತೆಯನ್ನು ಶ್ರೀಕೃಷ್ಣನು ಕುರುಕ್ಷೇತ್ರದಲ್ಲಿ ನಡೆದ ಯುದ್ಧರಂಗದಲ್ಲಿ ಅರ್ಜುನನನ್ನು ಕುರಿತು ಲೋಕಕ್ಕೆ ನೀಡಿರುವ ಉಪದೇಶವಾಗಿಯೂ, ಈ ಶರೀರವೆಂಬ ಕುರುಕ್ಷೇತ್ರದಲ್ಲಿ ಮಾಲಿನ್ಯ ಯುಕ್ತವಾದ ಬುದ್ಧಿ ಮತ್ತು ಪರಿಶುದ್ಧವಾದ ಬುದ್ಧಿಗಳ ಸಂವಾದ ರೂಪವಾಗಿಯೂ, ಅಧ್ಯಾತ್ಮಿಕ ಮತ್ತು ಅಧಿಭೂತಗಳಿಗೆ ಹೋಲಿಸಿಕೊಂಡು ಅನೇಕ ವಿಷಯಗಳನ್ನು ಹೃದಯಂಗಮವಾಗಿ, ಸಪ್ರಮಾಣವಾಗಿ ಚಮತ್ಕಾರವಾಗಿ ವರ್ಣಿಸಿದ್ದಾರೆ. ಆದ್ದರಿಂದ ಗೀತೆಯನ್ನು ಕೆಲವು ಸಲ ಓದಿರತಕ್ಕವರಿಗೆ ಇವರ ಕೃತಿಯಿಂದ ತುಂಬಾ ಉಪಯೋಗವಾಗುತ್ತದೆ. ಹೊಸಬರಿಗೆ ಸೋಜಿಗವಾದರೂ ಆಗಬಹುದು. ನನಗಂತೂ ಇದನ್ನು ಕೇಳಿ ಬಹಳ ಸಂತೋಷವಾಗಿದೆ.

ಗೀತಾಪ್ರೇಮಿಗಳು ಈ ಗ್ರಂಥವನ್ನು ಅವಲೋಕಿಸಿ ಇದರ ತಿರುಳನ್ನು ತಿಳಿಯಬೇಕಾಗಿ ಆಶಿಸುತ್ತೇನೆ. ಈ ಗ್ರಂಥರತ್ನವು ಅಚ್ಚಾಗಿ ಬಂದರೆ ಲೋಕೋಪಕಾರವಾಗುತ್ತದೆ ಎಂದು ನನ್ನ ಭಾವನೆ.

ಶ್ರೀ ಶಂಕರಾನಂದ ಭಾರತೀ
ಮೈಸೂರು ಗೀತಾಪ್ರಚಾರಿಣೀ
ಸಭಾಸಂಚಾಲಕರು

೨-೪-೧೯೫೬
ಮೈಸೂರು.

## ಪರಿವಿಡಿ





# ಗೀತೆ, ಅಂತರ್ವಾಣಿ

(Geeta is the Inner voice)

# ಗೀತೆ; 'ಅಂತರ್ವಾಣಿ !'



## ೧

### ಗೀತೆಯ ವಿಶ್ವವ್ಯಾಪಕತ್ವ

ಭಾರತ ಸಂಸ್ಕೃತಿಯ ಪ್ರತೀಕ ಭಗವದ್ಗೀತೆ. ಒಂದು ದೃಷ್ಟಿಯಲ್ಲಿ ಅದು ವಿಶ್ವಮಾನವ ಜೀವನದ ಆದರ್ಶ. ಯಾವ ಒಂದು ಜಾತಿ ಕೋಮುಗಳಿಗೆ ಮೀಸಲಾದ ಹೊತ್ತ ಗೆಯಲ್ಲ ಗೀತೆ. ಇದು ವಿಶ್ವದ ಸುಮಾರು ಏಳುನೂರು ಭಾಷೆಗ ಳಿಗೆ ಪರಿವರ್ತಿತವಾಗಿದೆ ಎಂಬ ಮಾತು ಗೀತೆಯ ವಿಶ್ವ ವ್ಯಾಪಕತ್ವವನ್ನು ಸಾರುತ್ತದೆ.

ಎಲ್ಲ ಉಪನಿಷತ್ತುಗಳ ಸಾರಸಂಗ್ರಹ ಗೀತೆ.

ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋ ವತ್ಸಸ್ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್॥

ಎಲ್ಲ ಉಪನಿಷತ್ತುಗಳು ಗೋವುಗಳು. ಅರ್ಜುನ ವತ್ಸ. ಶ್ರೀ ಕೃಷ್ಣ ಹಾಲು ಕರೆಯುವವ. ಗೀತಾರ್ಥವೇ ಹಾಲು. ಸುಬುದ್ಧಿಗಳಾದವರು ಗೀತಾಮೃತ ಪಾನಮಾಡುವರು ಎಂಬ ಮಾತು ಗೀತೆ ಎಲ್ಲ ಉಪನಿಷತ್ತುಗಳ ಸಾರ ಸಂಗ್ರಹವೆಂಬು ದನ್ನು ಸ್ಪಷ್ಟಪಡಿಸುತ್ತದೆ. ಭಾರತ ತತ್ತ್ವಶಾಸ್ತ್ರದ ಗಣಿ ಉಪ

ನಿಷತ್ತುಗಳು. ಅವು ನಮ್ಮ ಸಂಸ್ಕೃತಿಯ ದರ್ಶನವೂ ಹೌದು. ಅಂಥ ಉಪನಿಷತ್ತುಗಳ ಸಾರ ಭಗವದ್ಗೀತೆ ಎಂದ ಮೇಲೆ ಇದರ ಸ್ಥಾನ ಮತ್ತು ಇದರಲ್ಲಿನ ವಿಷಯ ಪ್ರಾಮುಖ್ಯತೆಯನ್ನು ಬೇರೆ ಹೇಳಬೇಕಾಗಿಲ್ಲ.

ವಿಶ್ವಸಾಹಿತ್ಯದಲ್ಲಿ ಗೀತೆ ಇಷ್ಟು ಪ್ರಮುಖಸ್ಥಾನ ಪಡೆಯುವುದಕ್ಕೆ ಅದರಲ್ಲಿ ಉಕ್ತವಾಗಿರುವ ವಿಷಯವೆಂತಹದು ಎಂಬ ಸಂದೇಹ ಮೂಡುವುದು ಯುಕ್ತ. ಇದಕ್ಕೆ ತಕ್ಕ ಸಮಾಧಾನವೂ ಗೀತೆಯಲ್ಲಿ ಅಡಗಿದೆ. ಸಂದೇಹಕ್ಕೆ ಸಿಲುಕಿದ ಅರ್ಜುನನನ್ನು ಸಮಾಧಾನ ಗೊಳಿಸುವುದಕ್ಕಾಗಿಯೇ ಗೀತೆ ಅವತರಿಸಿತು.

## ಆತ್ಮನಿಗಿಂತ ಅತಿರಿಕ್ತ ವಸ್ತುವಲ್ಲ ಗೀತೆ

ಭಗವದ್ಗೀತೆ ತನ (ಜೀವ) ಗಿಂತ ಬೇರೆ ವಸ್ತುವಲ್ಲ. ಹಾಗೆ ಇತರ ವಿಚಾರಗಳಿಗೆ ಸಂಬಂಧಪಟ್ಟಿದ್ದ ಪಕ್ಷದಲ್ಲಿ ಅದು ತನಗಿಂತ ಅನ್ಯವೆನಿಸುತಿತ್ತು. ಆಗ ಅದರಲ್ಲಿ ಇಷ್ಟು ಆತ್ಮೀಯತೆ ಯಾರಿಗೂ ಉಂಟಾಗುತ್ತಿರಲಿಲ್ಲ. ಲೋಕದಲ್ಲಿ ತನಗಿಂತ ಬೇರೆಯಾದ ವಸ್ತುಗಳಲ್ಲಿ ಮಾನವನಿಗೆ ಆತ್ಮೀಯತೆಯುಂಟು. ಆದರೆ ಅದು ಆತ್ಮನಲ್ಲಿರುವಷ್ಟು ಮುಖ್ಯವಾದ ಆತ್ಮೀಯತೆಯಲ್ಲ. ಸತಿ ಸುತ ಕ್ಷೇತ್ರಾದಿಗಳಲ್ಲಿ ನಮಗಿರುವ ಆತ್ಮೀಯತೆಯು ನಮ್ಮ ಸುಖಕ್ಕಾಗಿ ಮಾತ್ರ ! ತನಗೆ ಕಷ್ಟವೊದಗಿದಾಗ ತನ್ನ ಹೆಂಡತಿ ಮಕ್ಕಳು ಮುಂತಾದುವೆಲ್ಲವನ್ನು ತನ್ನ ರಕ್ಷಣೆಗಾಗಿ ಉಪಯೋಗಿಸಿಕೊಳ್ಳುವುದನ್ನು ಕಾಣುತ್ತೇವೆ.

" ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ "
ಬೃಹದಾರಣ್ಯಕ ೨-೪-೫

ಎಂಬ ಉಕ್ತಿ ಈ ವಿಷಯವನ್ನು ಸಮರ್ಥಿಸಿದೆ.

ಭಾರತೀಯ ತತ್ತ್ವಶಾಸ್ತ್ರವು ವೇದಾದಿ ಶ್ರುತಿಗಳನ್ನು ತನಗಿಂತ ಅನತಿರಿಕ್ತವೆಂದು ಹೇಳುತ್ತದೆ. ಶ್ರುತಿಗಳು ಈಶ್ವರವಾಣಿ. ಮಾತು ಆಡುವವನ ಅಧೀನ ; ಮತ್ತು ಅವನ ಇಚ್ಛೆಗೆ ವಿಷಯ. ಇಚ್ಛೆಯು ಆತ್ಮನ ಅಧೀನ.

" ಚತ್ವಾರಿ ವಾಕ್ಪರಿಮಿತಾ ಪದಾನಿ
ತಾನಿ ವಿದುರ್ಬ್ರಾಹ್ಮಣಾಃ ಯೇ ಮನೀಷಿಣಃ ।
ಗುಹಾ ತ್ರೀಣಿ ನಿಹಿತಾ ನೇಂಗಯಂತಿ ;
ತುರೀಯಾಂ ವಾಚಂ ಮನುಷ್ಯಾ ವದಂತಿ "॥

ಅನುಕೂಲಪವನನಿಂ ಜೀ-
ವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂ-।
ಗಿನವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದರ ಕಾರ್ಯಂ ಶಬ್ದಂ ॥

(ಶಬ್ದಮಣಿದರ್ಪಣ ೧-೯)

ಅಂದರೆ ಜೀವನ ಅಥವಾ ಅಂತರಾತ್ಮನ ಇಚ್ಛಾಶಕ್ತಿಯ ಸ್ಫುರಣದಿಂದ ಅನುಕೂಲಪವನನ ಚಲನವುಂಟಾಗಿ ನಾಭಿಮೂಲದಲ್ಲಿ ಆರಂಭವಾದ ನಾದವು ನಾಭಿ, ಹೃದಯ, ಕಂಠ ಮತ್ತು ಮುಖಗಳಲ್ಲಿ ಕ್ರಮವಾಗಿ ಸೂಕ್ಷ್ಮಾ (ಪರಾ) ಪಶ್ಯಂತೀ, ಮಧ್ಯಮಾ, ಮತ್ತು ವೈಖರಿಗಳೆಂಬ ಹೆಸರು ತಳೆದು ಅಂಕುರಾಯಮಾಣ, ಅಂಕುರಿತ, ಪಲ್ಲವಿತ ಮತ್ತು ಫಲಿತಎಂಬ

ಅವಸ್ಥೆಗಳನ್ನು ತಳೆದು ಶಬ್ದರೂಪ ಹೊಂದುತ್ತದೆ. ಜೈನರು ಶಬ್ದವನ್ನು ದ್ರವ್ಯವೆನ್ನುವರು. ಅದು ಶ್ವೇತವರ್ಣ.

ಅಂದ ಮೇಲೆ ನಾವು ನುಡಿಯುವ ಪ್ರತಿಯೊಂದು ಶಬ್ದವೂ ಆತ್ಮನ ಇಚ್ಛೆಯಂತೆ ಅನುಕೂಲ ಪವನನಿಂದ ಪ್ರೇರಿತವಾಗಿ ನಾಭಿಯಲ್ಲಿ ಸೂಕ್ಷ್ಮವಾಗಿ ಕಹಳೆಯಿಂದ ಧ್ವನಿಯು ಹುಟ್ಟುವ ಹಾಗೆ ಉಂಟಾಗುತ್ತದೆ. ನಾಭಿಯಿಂದ ಕಂಠದವರೆಗೆ ಶಬ್ದವು ಅವ್ಯಕ್ತವಾಗಿ ಮೂರು ಅವಸ್ಥೆಗಳನ್ನು ಪಡೆಯುತ್ತದೆ. ಅನಂತರ ಮುಖಕ್ಕೆ ಬಂದು ಕಂಠ, ತಾಲು ಮೊದಲಾದವುಗಳಿಗೆ ತಗುಲಿ ಆಯಾ ಶಬ್ದರೂಪವನ್ನು ಪಡೆಯುತ್ತದೆ ಎಂಬುದು ಭಾರತೀಯ ಶಬ್ದಶಾಸ್ತ್ರದ ರಹಸ್ಯವಾಗಿದೆ. ಇಂಥ ಹೃದಯವಾಣಿಯನ್ನು ಮನೀಷಿಗಳಾದ ಬ್ರಹ್ಮವಿದರು ಗುರ್ತಿಸುವರೆಂದು ಶ್ರುತಿ ಸಾರಿದೆ. ಆದ್ದರಿಂದಲೇ ನಮ್ಮ ಹಿರಿಯರು ಮಾತಿನ ಮಿತಿಗೆ ಅಷ್ಟೊಂದು ಮಹತ್ವವನ್ನು ಕೊಟ್ಟಿರುವರು. ಶಿವಶರಣರಂತೂ "ಮಾತೆಂಬುದು ಜ್ಯೋತಿರ್ಲಿಂಗ" ಎಂದರೆ ಅದು ಪರಮಾತ್ಮ ಸ್ವರೂಪವೆಂದೇ ಹೇಳಿದ್ದಾರೆ. "ಶಬ್ದಬ್ರಹ್ಮ" ಎಂಬ ದಾರ್ಶನಿಕ ಉಕ್ತಿಯೂ ಇದನ್ನೇ ಸಮರ್ಥಿಸುತ್ತದೆ. ಇವೇ ವಿಷಯವನ್ನು ಬಾದರಾಯಣರು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸ್ಪಷ್ಟಪಡಿಸಿರುತ್ತಾರೆ.

ಒಟ್ಟಿನಲ್ಲಿ ಶ್ರುತಿಸಾರಭೂತವಾದ ಭಗವದ್ಗೀತೆಯೂ ಈಶ್ವರವಾಣಿಯೆಂಬುದು ಸ್ಪಷ್ಟವಾಯಿತು. ಅದು ಆತ್ಮನಿಗೆ ಅನನ್ಯವೆಂಬುದೂ ಸಿದ್ಧವಾಯಿತು. ಅದರಿಂದಲೇ ಗೀತೆಯ ಬಗ್ಗೆ

ಸರ್ವರಿಗೂ ಆತ್ಮೀಯತೆಯುಂಟಾಗಿರುವುದು. ಇಲ್ಲದಲ್ಲಿ ಅದು ಇತರ ಸಾಹಿತ್ಯ ಕೃತಿಗಳಂತೆ ತಕ್ಕಷ್ಟು ಪ್ರಚಾರದಲ್ಲಿರುತ್ತಿತ್ತು. ಶ್ರೀ ಕೃಷ್ಣನು ಈಶ್ವರ. ಅವನ ವಾಣಿ ಈಶ್ವರವಾಣಿ ಎಂಬ ದೃಷ್ಟಿಯಲ್ಲಂತೂ ಯಾವ ಅಭ್ಯಂತರವೂ ಇಲ್ಲ ಅಂತೆಯೇ ಅದು ಭಗವದ್ಗೀತೆ. ಕೃಷ್ಣಗೀತೆಯಲ್ಲ. ಅಂಥ ಈಶ್ವರನೇ ಆತ್ಮನೊಂದಿಗಿರುವ ಪರಮಾತ್ಮ. ಅವನು ಆತ್ಮನಿಗೆ ಬೋಧಿಸುವ ವಾಣಿಯೇ ಭಗವದ್ಗೀತೆ ಎಂದರೂ ಸಹ ಗೀತೆ ಆತ್ಮನಿಗೆ ಅನತಿರಿಕ್ತ ಎಂದರೆ ತನಗಿಂತ ಬೇರೆಯಲ್ಲವೆಂಬುದು ಸಿದ್ಧವಾಯಿತು.

## ಗೀತೆ ; ಅಂತರ್ವಾಣಿ.

ಭಗವದ್ಗೀತೆ ಪುರುಷೋತ್ತಮನ ಅಂತರ್ವಾಣಿ. ಪುರುಷೋತ್ತಮನೆಂದ ಮಾತ್ರದಿಂದ ಅದು 'ಅತಿಮಾನವನೊಬ್ಬನ ಒಳದನಿ' ಎಂಬ ಮಟ್ಟದಲ್ಲಿ ವಿಚಾರ ಮಾಡಬೇಕೆಂದೇನಲ್ಲ. ಸಾಧಕನಾಗಿ ಅವತರಿಸಿದ ಸುಸಂಸ್ಕೃತನಾದ ಪ್ರತಿಯೊಬ್ಬ ಪುರುಷನೂ ಸಂಸ್ಕಾರ ವಿಶೇಷದಿಂದ ಉತ್ತಮ ಪುರುಷನಾಗಿ ಪುರುಷೋತ್ತಮನಾಗಬಲ್ಲನೆಂಬುದೇ ಪುರುಷೋತ್ತಮ ಶಬ್ದದ ಮಾರ್ಮಿಕ ಅರ್ಥ. ಭಗವಂತ ಶ್ರೀ ಕೃಷ್ಣನು ಪುರುಷೋತ್ತಮನಾದುದೂ ಇದೇ ಅರ್ಥದಲ್ಲಿ ಎಂದು ನಾವು ಭಾವಿಸಿದರೆ ಗೀತೆ ಪುರುಷ ಸಾಮಾನ್ಯಕ್ಕೆ ಬಹಳ ಹತ್ತಿರವಾದ ಹೊತ್ತಗೆಯಾಗುತ್ತದೆ.

" ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥

(ಶಾಕುಂತಲ ೧—೨೨.)

ಎಂಬ ಮಹಾಕವಿಯ ಮಾತು ಸತ್ಪುರುಷರಿಗೆ ಆಂತರಿಕ ಪ್ರಮಾಣ ಎಂದರೆ ಅಂತರ್ವಾಣಿಯ ಆದೇಶವೇ ಬಹಳ ಮುಖ್ಯ ವೆಂಬುದನ್ನು ಸಾರುತ್ತದೆ.

ಮಾನವನ ಹೃದಯಕೋಶದಲ್ಲಿ ಜೀವಾತ್ಮ-ಪರಮಾತ್ಮರೀ ರ್ವರೂ ನೆಲೆಸಿರುವರೆಂದು ಭಾರತೀಯ ತತ್ತ್ವಶಾಸ್ತ್ರ ಘೋಷಿಸಿದೆ.

ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ ॥*

ದೇಹವೇ ಒಂದು ವೃಕ್ಷ. ಅದರ ಮೇಲೆ ಎರಡು ಹಕ್ಕಿಗಳು ಕುಳಿತಿವೆ. ಅವುಗಳಲ್ಲೊಂದು ಕರ್ಮಫಲವನ್ನು ಅನುಭವಿಸು ತ್ತಿರುತ್ತದೆ. ಮತ್ತೊಂದು ಅದಕ್ಕೆ ಸಾಕ್ಷಿಯಾಗಿ ನಿರ್ಲಿಪ್ತವಾ ಗಿರುತ್ತದೆ ಎಂಬ ವರ್ಣನೆ ಇದನ್ನು ಸಮರ್ಥಿಸುತ್ತದೆ.

ಜೀವಾತ್ಮನು ಪ್ರತಿನಿತ್ಯವೂ ಸುಷುಪ್ತಿ (ಗಾಢನಿದ್ರೆ) ಅವಸ್ಥೆ ಯಲ್ಲಿ ಪರಮಾತ್ಮನ ಜೊತೆಗಿರುತ್ತಾನೆ. ಆದುದರಿಂದಲೇ ಅವನು ರತಿಮಗ್ನ ಪುರುಷನಂತೆ ತನ್ಮಯನಾಗಿ ಹೊರಗಿನ ವಿಷಯ ಗಳನ್ನು ಅರಿಯಲಾರನು. 'ನಾನು ಸುಖವಾಗಿ ನಿದ್ರಿಸಿದೆ ; ಯಾವುದೂ ಗೊತ್ತಾಗಲಿಲ್ಲ' ಎಂಬ ಅನುಭವ ಎಲ್ಲರಿಗೂ ಇರು ತ್ತದೆ.

" ಸುಷುಪ್ತೌ ತಾವದಯಂ ಪುರುಷಃ ಪ್ರಾಜ್ಞೇನಾತ್ಮನಾ
ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಮ್ "

*ಋಗ್ವೇದ (ಮಂ ೧. ಸೂ. ೧೬೪. ಮಂ. ೨೦) ಮುಂಡಕ (೩-೧)

ಎಂದರೆ ಜೀವಾತ್ಮನು ಸುಷುಪ್ತಿಯಲ್ಲಿ ಪರಮಾತ್ಮನೊಂದಿಗಿರುವನು. ಆದ್ದರಿಂದ ಅವನಿಗೆ ಬಾಹ್ಯಜಗತ್ತಿನ ಪರಿವೆ ಇರುವುದಿಲ್ಲ. ಇದೇ ಅಂಶವು "ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ" (ಬ್ರಂ. ಸೂ. ೧-೩-೪೨) ಎಂಬ ಸೂತ್ರ ಭಾಷ್ಯದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ.

ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ।
ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ॥

ಎಂಬ ಉಕ್ತಿಯೂ ಸಹ ಪರಮಾತ್ಮನು ಜೀವಾತ್ಮನ ಅಗ್ರದಲ್ಲಿರುವನೆಂಬುದನ್ನು ಧೃಢಪಡಿಸಿರುತ್ತದೆ.

## ಜೀವಾತ್ಮ ಪರಮಾತ್ಮರ ಸಂಬಂಧ.

ಒಟ್ಟಿನಲ್ಲಿ ಜೀವಾತ್ಮ ಪರಮಾತ್ಮರಿಗೆ ಈ ಶರೀರವೇ ಮನೆ. ಅಲ್ಲಿ ಅವರಿಬ್ಬರೂ ಒಬ್ಬರನ್ನೊಬ್ಬರು ಅಗಲದಿರುತ್ತಾರೆ ಎಂಬ ಅಂಶವು ಇದರಿಂದ ಸ್ಪಷ್ಟವಾಯಿತು. ಇಂಥ ಸ್ಥಿತಿಯಲ್ಲಿ ಜೀವನು ಪರಮಾತ್ಮನ ಅಧೀನ, ಅಸ್ವತಂತ್ರ ಎಂಬುದೂ ಸಿದ್ಧವೇ ಆಯಿತು. ಪರಮಾತ್ಮನು ಒಡೆಯ, ಸ್ವತಂತ್ರ. ಇಬ್ಬರಿಗೂ ಪ್ರಭುಭೃತ್ಯಭಾವಸಿದ್ಧವಾಗಿದೆ. ಪ್ರಭುವು ತನ್ನ ಭೃತ್ಯನಿಗೆ ಕಾರ್ಯಾಕಾರ್ಯಗಳನ್ನು ಪ್ರೇರಿಸಬೇಕಾದುದು ಯುಕ್ತ. ಸುಸಂಸ್ಕೃತ ಭೃತ್ಯನು ತನ್ನ ಪ್ರಭುವಿನ ಆಜ್ಞೆಗೆ ಅನುಗುಣವಾಗಿ ವರ್ತಿಸುವುದು ಸಭ್ಯತೆ. ಅಂದಮೇಲೆ ಪ್ರಭು ತನ್ನ ನೆಚ್ಚಿನ ಭೃತ್ಯನಿಗೆ ಪ್ರೇರಿಪಿಸಿದ ನುಡಿ ಭಗವದ್ಗೀತೆ. ಆದ್ದರಿಂದಲೇ ಅದು ಪ್ರತಿಮಾನವನ

"ಅಂತರ್ವಾಣಿ" (Inner Voice). ಸತ್ಪುರುಷರು ಆ ವಾಣಿಯನ್ನು ಆಲಿಸಬಲ್ಲರು. ಆದ್ದರಿಂದಲೇ ಸತ್ಪುರುಷರಿಗೆ ಅದು ಮುಖ್ಯ ಪ್ರಮಾಣ!

ಇದೇ ಅರ್ಥವನ್ನೇ ಗೀತೆಯು ಮುಕ್ತ ಕಂಠದಿಂದ ಘೋಷಿಸಿದೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥

(ಅ. ೧೮-೬೧)

'ಅರ್ಜುನ, ಎಲ್ಲ ಪ್ರಾಣಿಗಳ ಹೃದಯದಲ್ಲಿ ಈಶ್ವರನು ವಾಸಿಸುತ್ತಿರುವನು. ಅವನು ಶರೀರವೆಂಬ ಯಂತ್ರಗಳಲ್ಲಿ ಆರೂಢವಾಗಿರುವ ಪ್ರಾಣಿಗಳನ್ನು ಅವರವರ ಕರ್ಮಾನುಸಾರವಾಗಿ ತನ್ನ ಮಾಯೆಯಿಂದ ಆಯಾ ಕರ್ಮಗಳಲ್ಲಿ ಪ್ರೇರಿಸುತ್ತಿರುವನು ಎಂಬ ಮಾತು ಮೇಲಿನ ವಿಚಾರವನ್ನು ಸಮರ್ಥಿಸಿದೆ. ಅಷ್ಟೇ ಅಲ್ಲದೆ ಶ್ರೀ ಕೃಷ್ಣನು ತಾನೇ ಪರಮಾತ್ಮನೆಂದು ಮೇಲೆ ಮೇಲೆ ಹೇಳುತ್ತಿರುವನಾದರೂ ಆತನೂ ಸಹ ತನಗಿಂತ ಅತಿರಿಕ್ತನಾದ ಈಶ್ವರನೊಬ್ಬನಿರುವನೆಂದು ಹೇಳಿರುತ್ತಾನೆ.

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ॥

(ಅ. ೧೫-೧೭)

ತನಗಿಂತ ಅನ್ಯನಾದವನೇ ಉತ್ತಮ ಪುರುಷ. ಅವನ ಹೆಸರು ಪರಮಾತ್ಮ. ಮೂರು ಲೋಕವನ್ನು ವ್ಯಾಪಿಸಿ ಧರಿಸಿ

ರುವ ಈಶ್ವರನವನೇ ಎಂಬ ಮಾತು ಹೃದಯದಲ್ಲಿ ಅಂತರ್ಯಾ ಮಿಯಾಗಿರುವ ಈಶ್ವರನು ಜೀವನನ್ನು ಪ್ರೇರಿಸುತ್ತಿರುವನೆಂಬು ದನ್ನೇ ಸಮರ್ಥಿಸುತ್ತದೆ. ಅಂದರೆ ಭಗವಾನ್ ಶ್ರೀ ಕೃಷ್ಣನು ಆತ್ಮೈಕಾನುಸಂಧಾನದಲ್ಲಿ ಪರಮಾತ್ಮನೊಂದಿಗೆ ಅಭೇದವನ್ನು ಹೊಂದಿದ ಸಿದ್ಧಪುರುಷ ಪುರುಷೋತ್ತಮನೆಂಬ ಅಂಶವು ಸ್ಪಷ್ಟ ವಾಗುತ್ತದೆ. ಆದ್ದರಿಂದಲೇ ಆತನು ತಾನೇ ಪರಮಾತ್ಮನೆಂದು ಹೇಳಿಕೊಳ್ಳುವುದು ಯುಕ್ತ.

## ಪುರುಷೋತ್ತಮನಾರು ?

ಇದೇ ವಿಚಾರವನ್ನು ಗೀತೆ ಪುರುಷೋತ್ತಮ ಯೋಗ ದಲ್ಲಿ ಹೃದಯಂಗಮವಾಗಿ ಹೇಳಿದೆ. ಗುಣಾತೀತನ ಅವಸ್ಥೆಗೆ ಪುರುಷನು ಮುಟ್ಟಿದಾಗ 'ಪುರುಷೋತ್ತಮ' 'ಅಕ್ಷರ' ಎಂಬ ಸಂಜ್ಞೆಗಳನ್ನು ಪಡೆಯುವನು.

ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।
ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥

(೧೫–೭)

ಜಗತ್ತಿನಲ್ಲಿ ಜೀವನೆನಿಸಿರುವನು ನನ್ನ ಅಂಶ. ಅವನು ಐದು ಇಂದ್ರಿಯಗಳನ್ನೂ ಮನಸ್ಸನ್ನೂ ಆಶ್ರಯಿಸಿರುತ್ತಾನೆ.

ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥

(೧೫–೧೦)

ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।
ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥

(೧೫–೧೧)

"ಶರೀರವನ್ನು ತ್ಯಾಗಮಾಡುವ ಅಥವಾ ಅದರಲ್ಲಿ ವಾಸಿಸುವ, ಗುಣಗಳನ್ನು ಆಶ್ರಯಿಸಿ ಭೋಗಗಳನ್ನು ಅನುಭವಿಸುವ ಈ ಅಂಶರೂಪಿಯಾದ ಈಶ್ವರನನ್ನು ಮೂರ್ಖರು ನೋಡುವುದಿಲ್ಲ. ಜ್ಞಾನನೇತ್ರವುಳ್ಳವರಿಗೆ ಆ ಈಶ್ವರನು ಕಾಣುವನು. ಯೋಗಿಗಳು ತಮ್ಮಲ್ಲಿರುವ ಈಶ್ವರನನ್ನು ಕಾಣುವರು. ಆತ್ಮಶುದ್ಧಿ ಇಲ್ಲದ ಮೂಢರು ಪ್ರಯತ್ನಮಾಡಿದರೂ ಇವನನ್ನು ಅರಿಯಲಾರರು."

ಮತ್ತು "ಗುಣತ್ರಯ ವಿಭಾಗ" ಎಂಬ ಇದರ ಹಿಂದಿನ ಅಧ್ಯಾಯದಲ್ಲಿ ಸತ್ವ ರಜಸ್ತಮೋಗುಣಗಳ ಸ್ವಭಾವವನ್ನು ತಿಳಿಸಿ ಅವುಗಳನ್ನು ಮೀರಿದವನೇ ಪುರುಷೋತ್ತಮ ಪದವಿಗೆ ಏರುವನೆಂಬುದನ್ನು ವ್ಯಕ್ತಪಡಿಸಲಾಗಿದೆ.

ಗುಣಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯು ಜರಾ ದುಃಖೈರ್ವಿಮುಕ್ತೋಽಮೃತಮಶ್ನುತೇ ॥

(೧೪–೨೦)

ದೇಹ ಸಂಬಂಧದಿಂದ ಉತ್ಪನ್ನವಾಗುವ ಈ ಮೂರು ಗುಣಗಳನ್ನು ದಾಟಿದ ಪುರುಷನು ಹುಟ್ಟು ಸಾವು ಮುಪ್ಪು ಇವುಗಳ ದುಃಖದಿಂದ ಪಾರಾಗುವನು ಎಂದು ಹೇಳಿರುವುದಲ್ಲದೆ ಇದೇ ಅಧ್ಯಾಯದ ಕಡೆಯಲ್ಲಿ ಭಗವಂತನು

ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥
(೧೪-೨೬)

ತನ್ನಲ್ಲಿ ಅನನ್ಯಭಕ್ತಿ ಮಾಡಿದವನನ್ನು ಗುಣಾತೀತನನ್ನಾಗಿ ಮಾಡಿ ತನ್ನ ಪದವಿ (ಬ್ರಹ್ಮಭಾವ) ಯನ್ನೇ ಅನುಗ್ರಹಿಸುವುದಾಗಿ ವಚನವಿತ್ತಿದ್ದಾನೆ. ಇದರಿಂದ ಗುಣಾತೀತನೇ ಪುರುಷೋತ್ತಮನೆಂಬುದು ಸ್ಪಷ್ಟವಾಯಿತು.

## ಅಂತರ್ವಾಣಿಯ ಅರಿವು ಯಾರಿಗೆ ?

ಸಾಧನಮಾರ್ಗದಲ್ಲಿ ಅಡಿಯಿಟ್ಟ ಪ್ರತಿಮಾನವನೂ ತನ್ನ ಹೃದಯದಲ್ಲಿ ಪ್ರೇರಿಸುವ ಪರಮಾತ್ಮನ ಅಂತರ್ವಾಣಿಯನ್ನು ಗುರುತಿಸಬಹುದು. ವಿಷಯಾಸಕ್ತರಿಗೆ ಅದು ಕೇಳಿಸದು. ಕೇಳಿಸಿದರೂ ತಿಳಿಯದು. ಆದ್ದರಿಂದಲೇ ಪರಮ ಪವಿತ್ರವಾದ ಈ ಉಪದೇಶವು.

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥
(೧೮-೬೭)

ಯಾರು ತಪಸ್ವಿಗಳಲ್ಲವೊ, ಯಾರು ಭಕ್ತರಲ್ಲವೊ, ಯಾರು ಕೇಳಬಯಸುವುದಿಲ್ಲವೊ, ಯಾರು ನನ್ನನ್ನು ದ್ವೇಷಿಸುವರೊ, ಅವರಿಗೆ ಈ ಒಳದನಿ ಕೇಳುವುದಿಲ್ಲವೆಂದು ಸೂಚಿ

ಸಲಾಗಿದೆ. ಪರಮಾತ್ಮನಲ್ಲಿ ಪರಮ ಭಕ್ತನಾದವನಿಗೆ ಮಾತ್ರ ಇದು ಅರಿವಾಗುತ್ತದೆ.

ಆದುದರಿಂದ ಗೀತೆ ಆತ್ಮನಿಗೆ ಅನ್ಯವಲ್ಲ. ಅದು ಹೃದಯಗೀತೆ. ಅಂತೆಯೇ ಗೀತೆ ಪ್ರತಿ ಸುಸಂಸ್ಕೃತ ಮಾನವನ ಅಂತರ್ವಾಣಿ ! ಅಮರವಾಣಿ !





೨

## ಭಾರತ ಕಥಾಸಂದರ್ಭ ವಿರೋಧ !

ಗೀತೆ ಪ್ರತಿಮಾನವನ ಅಂತರ್ವಾಣಿ ಎಂದು ಭಾವಿಸಿದಲ್ಲಿ ಇತಿಹಾಸವೆಂದು ಪ್ರಸಿದ್ಧವಾದ ಮಹಾಭಾರತ ಕಥಾಸಂದರ್ಭಕ್ಕೆ ವಿರೋಧವುಂಟಾಗುವುದು. ಅಲ್ಲಿ ಪ್ರಸಿದ್ಧವಾದ ಚಂದ್ರವಂಶದ ಅರಸರಾದ ಕುರು ಪಾಂಡವರಿಗೆ ನಡೆದ ಘನಘೋರ ಸಂಗ್ರಾಮವು ಅಸಂಗತವಾಗುತ್ತದೆ ಎಂಬ ಸಂದೇಹ ಮೂಡುವುದು ಸಹಜ.

## ಕಾವ್ಯದ ಮೂಲೋದ್ದೇಶ

ಈ ವಿಷಯವನ್ನು ಚರ್ಚಿಸುವಾಗ ಒಂದು ಅಂಶವನ್ನು ಸ್ಮರಿಸುವುದು ಆವಶ್ಯಕ. ಭಾರತ ಸಂಸ್ಕೃತಿಯು ನಮ್ಮ ಸಾಹಿತ್ಯದಲ್ಲಿ ರೂಪಿತವಾಗಿದೆ. ನಮ್ಮ ಸಾಹಿತ್ಯ ಪ್ರಭುಸಮ್ಮಿತೆ, ಮಿತ್ರಸಮ್ಮಿತೆ, ಮತ್ತು ಕಾಂತಾಸಮ್ಮಿತೆ ಎಂದು ಮೂರು ವಿಧವಾಗಿದೆ. 'ಸಮ್ಮಿತೆ' ಎಂದರೆ 'ಸದೃಶ' ಎಂದು ಅರ್ಥ.

ಪ್ರಭುಸಮ್ಮಿತೆ ರಾಜಾಜ್ಞೆ ಇದ್ದಂತೆ. ವೇದಾದಿ ಶ್ರುತಿಗಳಲ್ಲಿ ವಿಧಿ ನಿಷೇಧಗಳು ರಾಜಾಜ್ಞೆಯಂತೆ ಮಾನವರಿಗೆ ಧರ್ಮಾಧರ್ಮಗಳನ್ನು ಬೋಧಿಸುತ್ತವೆ. ಸತ್ಯಂ ವದ. (ನಿಜ ಹೇಳು) "ಧರ್ಮಂ ಚರ" (ಧರ್ಮ ಮಾಡು) ಎಂಬ ಮಾತುಗಳು ಯುಕ್ತಾಯುಕ್ತ ವಿವೇಚನೆಗೆ ಅವಕಾಶಕೊಡದೆ ವಿಧಿಸಲ್ಪ

ಟ್ಟವೆ. ತನಗೆ ಒಪ್ಪಿಗೆ ಇರಲಿ, ಇಲ್ಲದಿರಲಿ ಪ್ರಭುವಿನ ಆಜ್ಞೆ ಅವಶ್ಯ ಅನುಷ್ಠಾನ ಮಾಡತಕ್ಕದ್ದು. ಅಂದರೆ ವೇದಾದಿ ಶಾಸ್ತ್ರ ಸಾಹಿತ್ಯವು ಪ್ರಭುಸಮ್ಮಿತೆ ಎನಿಸಿರುವುದರಿಂದ ಅದರಲ್ಲಿ ಮಾನವರಿಗೆ ಹೃತ್ಪೂರ್ವಕವಾದ ಒಲವು ಉದಿಸುವುದು ಕಷ್ಟ. ಏನೋ ಒಂದು ಶಿಷ್ಟಾಚಾರಕ್ಕೆ ಕಟ್ಟುಬಿದ್ದು ಶಾಸ್ತ್ರಾನುಷ್ಠಾನಮಾಡಬೇಕಾಗಿದೆ.

ಎರಡನೆಯದು 'ಮಿತ್ರಸಮ್ಮಿತೆ' ಮಿತ್ರನೆಂದರೆ ಸ್ನೇಹಿತ. ಒಳ್ಳೆಯ ಸ್ನೇಹಿತನು ತನ್ನ ಗೆಳೆಯನಿಗೆ ಅನೇಕ ಕತೆಗಳನ್ನು ಉದಹರಿಸಿ ಸದುಪದೇಶಮಾಡುತ್ತಾನೆ. ಸುಸಂಸ್ಕೃತನು ತನ್ನ ಗೆಳೆಯನ ಮಾತಿನಂತೆ ನಡೆದು ಕೃತಕೃತ್ಯನಾಗುತ್ತಾನೆ. ಆದರೆ ಗೆಳೆಯನ ಮಾತು ಪ್ರಭುವಿನ ಆಜ್ಞೆಯಂತೆ ನಿರ್ಬಂಧದ್ದಲ್ಲ. ಇಷ್ಟವಿದ್ದರೆ ಮಾಡಬಹುದು, ಇಲ್ಲದಿದ್ದರೆ ಬಿಡಬಹುದು. ನಮ್ಮ ಸಾಹಿತ್ಯದಲ್ಲಿನ ಪೌರಾಣಿಕ ಸಾಹಿತ್ಯ ಈ ಬಗೆಯದು. ಪುರಾಣಗಳಲ್ಲಿ ಬರುವ ಐತಿಹ್ಯಗಳು ಜನತೆಗೆ ದಿಕ್ಪ್ರದರ್ಶನ ಮಾಡಿ ಉಪಕರಿಸುತ್ತವೆ.

ಮೂರನೆಯದು 'ಕಾಂತಾಸಮ್ಮಿತೆ' ಕಾಂತೆ ಎಂದರೆ ಪ್ರಿಯೆ. ಪ್ರಿಯೆಯು ತನ್ನ ಇನಿಯನನ್ನು ಒಲವಿನಿಂದ ವಶಪಡಿಸಿಕೊಂಡು ಅನುಕೂಲ ಸಂದರ್ಭವನ್ನುಕಂಡು ಸದುಪದೇಶ ಮಾಡುವಳು. "ನೋಡಿ, ರಾವಣನ ಹಾಗೆ ಇರಬಾರದು! ರಾಮನ ಹಾಗೆ ಇರಬೇಕು" ಎಂದು ತನ್ನ ಮನೋಜ್ಞವಾದ ಹಾವ ಭಾವ ವಿಲಾಸಗಳಿಂದ ಅವನ ಮನವೊಲಿಸಿ ಸನ್ಮಾರ್ಗಕ್ಕೆ

ಹೆಚ್ಚುತ್ತಾಳೆ. ಪ್ರಿಯಳ ಮಾತು ರಾಜಾಜ್ಞೆಯಷ್ಟು ನಿರ್ಬಂಧ ದ್ದಲ್ಲ. ಮಿತ್ರನ ಮಾತಿನಂತೆ ಬೇಕುಬಿಟ್ಟಿಯದೂ ಅಲ್ಲ. ಜಗತ್ತಿನಲ್ಲಿ ಪ್ರಿಯಾನುರಾಗವು ಎಲ್ಲಕ್ಕಿಂತ ಆಕರ್ಷಣೆಯುಳ್ಳದ್ದು. ಅದಕ್ಕೆ ಮಣಿಯದ ಚೇತನವಿಲ್ಲ. ಪ್ರಿಯೆಯ ಆವೇಶವು ಪ್ರೇಮದಿಂದ ಹೃತ್ಪೂರ್ವಕವಾಗಿ ಅನುಷ್ಠಾನ ಮಾಡತಕ್ಕುದು. ಸಾಹಿತ್ಯದಲ್ಲಿ ರಾಮಾಯಣ ಮಹಾಭಾರತಾದಿ ಕಾವ್ಯಗಳು 'ಕಾಂತಾಸಮ್ಮಿತೆ' ಎನಿಸಿವೆ. ಈ ಕಾವ್ಯಗಳಲ್ಲಿ ಬರುವ ನವರಸಭರಿತವಾದ ಪ್ರಕರಣಗಳು ಸಹೃದಯರ ಮನವೊಲಿಸಿ ಅವರನ್ನು ಸನ್ಮಾರ್ಗಕ್ಕೆ ತಿರುಗಿಸುವುವಾಗಿವೆ.

## ಮಹಾಭಾರತವು ಪುರಾಣವಲ್ಲ

ಹದಿನೆಂಟು ಪುರಾಣಗಳ ಕರ್ತೃ ವೇದವ್ಯಾಸನೆಂಬ ಪ್ರವಾದವಿದೆ. ಮಹಾಭಾರತವೂ ವ್ಯಾಸಕರ್ತೃಕವಾದ್ದರಿಂದ ಅದೂ ಪುರಾಣಗಳ ಶ್ರೇಣಿಯಲ್ಲಿ ಸೇರಿರಬಹುದೆ ಎಂಬ ಸಂದೇಹಕ್ಕೆ ಅವಕಾಶವಿದೆ. ಆದರೆ ಮಹಾಭಾರತವು ಉಕ್ತವಾಗಿರುವ ಹದಿನೆಂಟು ಪುರಾಣಗಳ ಹಾಗೂ ಉಪಪುರಾಣಗಳ ಶ್ರೇಣಿಯಲ್ಲಿ ಪರಿಗಣಿತವಾಗಿಲ್ಲ. ಬದಲಾಗಿ ಇದು 'ಇತಿಹಾಸ'ವೆಂದು ಪ್ರಸಿದ್ಧವಾಗಿದೆ. ಇತಿಹಾಸವೆಂದಮಾತ್ರಕ್ಕೆ ಅದು ನಮ್ಮ ಇಂದಿನ ಚರಿತ್ರೆ (History) ಎಂಬ ಅರ್ಥದಲ್ಲಲ್ಲ! ಅಂದರೆ ಚರಿತ್ರೆಯಂತೆ ತೋರುವ ವಿಸ್ತಾರವೂ ಮಾನವಸಹಜವೂ ಆದ ಅನಂತ ಜೀವ ಚಿತ್ರಗಳಿಂದ ನಿರ್ಮಿಸಿದ 'ಇತಿಹಾಸ' ಮಹಾಭಾರತ. ಮಹಾಭಾರತದಲ್ಲಿ ಬರುವ ವ್ಯಕ್ತಿಗಳೂ ಸನ್ನಿವೇಶಗಳೂ ತ್ರಿಕಾ

ಲಾಬಾಧಿತವಾದ ಸತ್ಯವಿಚಾರಗಳಿಂದ ಭರಿತವಾಗಿವೆ. ಮಾನವ ಜೀವನವನ್ನು ಎಂದೆಂದಿಗೂ ಪ್ರತಿಬಿಂಬಿಸುವ ಮಧುರ ಸನ್ನಿವೇಶಗಳಿಂದ ಅಲಂಕೃತವಾಗಿದೆ ಈ ಮಹಾಕಾವ್ಯ ಮಹಾಭಾರತ!

## ಭಾರತಃ ಪಂಚಮೋ ವೇದಃ

ಒಂದು ದೃಷ್ಟಿಯಿಂದ ಮಹಾಭಾರತವು ವಿಶ್ವಕಾವ್ಯ ಮಾತ್ರವಲ್ಲ. ಅದಕ್ಕೆ ಐದನೆಯ ವೇದವೆಂಬ ಪ್ರವಾದವಿದೆ. ವೇದವು ಪ್ರಭುಸಮ್ಮಿತೆಯೆಂದು ಹಿಂದೆಯೇ ಹೇಳಿದೆ. ಈ ಮಾತು ಋಗಾದಿ ನಾಲ್ಕು ವೇದಗಳಿಗೆ ಒಮ್ಮೆ ಅನ್ವಯಿಸಿದರೂ ಅನ್ವಯಿಸಬಹುದು. ಆದರೆ ಪ್ರಜಾರಾಜ್ಯದಲ್ಲಿ ಪ್ರಭು (ರಾಜ) ವಿಗೆ ಸ್ಥಾನವೇ ಇಲ್ಲ. ಅದಕ್ಕಾಗಿ ವೇದಾದಿ ಸದ್ಗ್ರಂಥಗಳಿಗೆ ಪ್ರಭುಸಮ್ಮಿತೆ ಯೆಂಬುದಕ್ಕಿಂತ "ಮಾತೃಸಮ್ಮಿತೆ" ಎಂದು ಕರೆಯಬೇಕಾದದ್ದು ಸೂಕ್ತವೆಂದು ಮಹಾತ್ಮರಾದ ವಿನೋಭಾವೆಯವರು ಅಭಿಪ್ರಾಯಪಡುತ್ತಾರೆ. ಈ ದೃಷ್ಟಿಯಿಂದ ಮಹಾಭಾರತಕ್ಕೆ ಮಾತೃಸಮ್ಮಿತೆ ಎಂಬ ಹೆಸರು ಬಹು ಸಮಂಜಸವೆನಿಸುವುದು. ತತ್ರಾಪಿ ಭಗವದ್ಗೀತೆಯ ಭಾಗವಂತೂ ಸರ್ವೋಪನಿಷತ್‌ಗೋವುಗಳಿಂದ ಲೋಕೋದ್ಧಾರಕ್ಕಾಗಿ ಗೋಪಾಲನಂದನನು ಕರೆದ ಅಮೃತವೇ ಆಗಿದೆ. ಆದ್ದರಿಂದಲೇ ಅದು ಐದನೆಯ ವೇದವೆನಿಸಿತು. ವೇದದಲ್ಲಿ ಪ್ರಭುವಾಜ್ಞೆಯ ಪ್ರಯೋಗಗಳು ಕಂಡುಬಂದರೂ ಮಹಾಭಾರತದಲ್ಲಿ ಕಾಣುವುದಿಲ್ಲ. ಅಲ್ಲಿರುವುದು ಕೇವಲ ಮಾತೃವಾತ್ಸಲ್ಯ. ಭಕ್ತೋದ್ಧಾರಕ ಮರುಕ. ಕರುಳು ಕರಗಿಸುವ ರಸಾವಿಷ್ಕಾರ. ಅದು ವಜ್ರಾದಪಿ ಕಠೋರ. ಕುಸುಮಾದಪಿ ಮಾರ್ದವ.

## ಋಷಿ ಮಂತ್ರದ್ರಷ್ಟಾ

ಅಮೋಘವಾದ ತಪಶ್ಶಕ್ತಿಯಿಂದ ವಿಶ್ವತತ್ತ್ವಗಳನ್ನು ಸಾಕ್ಷಾತ್ಕಾರಮಾಡಿಕೊಂಡ ಮಹರ್ಷಿಗಳು ಮಂತ್ರ (ವಿಶ್ವರಹಸ್ಯ) ಗಳನ್ನು ಕಂಡು, ಹೇಳಿದರು. ಅದೇ ಮಂತ್ರಸಂಹಿತೆ ವೇದ. ಆ ಋಷಿ ಅಂಶವುಳ್ಳವರೇ ಕವಿಗಳೆನಿಸಿ ರಸಸಂಹಿತೆಗೆ ಕರ್ತ ರಾದರು. ಕಾವ್ಯ ರಸಸಂಹಿತೆ. 'ನಾಽನೃಷಿಃ ಕುರುತೇ ಕಾವ್ಯಂ' ಋಷಿ ಅಂಶವಿಲ್ಲದವನು ಕಾವ್ಯಕರ್ತೃವಾಗಲಾರ ಎಂಬ ಮಾತು ಈ ಅಂಶವನ್ನು ಸಮರ್ಥಿಸುತ್ತದೆ. 'ರವಿ ಕಾಣದುದಂ ಕವಿ ಕಂಡಂ' ಎಂಬ ನಾಣ್ಣುಡಿ ಅಲೌಕಿಕ ಅಪ್ರಾಕೃತಿಕ ಜಡ ಚೇತನಗಳ ಹೃದ್ಗತವನ್ನೂ ಕವಿ ಕಾಣಬಲ್ಲನೆಂಬುದನ್ನು ಸೂಚಿ ಸುತ್ತದೆ.

ಕಾವ್ಯಸೃಷ್ಟಿ ಬ್ರಹ್ಮ ಸೃಷ್ಟಿಗಿಂತ ವಿಲಕ್ಷಣ. ಇದು ಕೇವಲ ಆನಂದಮಯ. ಬ್ರಹ್ಮ ಸೃಷ್ಟಿಯಲ್ಲಿರುವಂತೆ ಇಲ್ಲಿ ಸುಖ ದುಃಖ ಗಳ ಗೊಂದಲವಿಲ್ಲ. ಬ್ರಹ್ಮಸೃಷ್ಟಿಯು ಕಾರಣ ಕಾರ್ಯಗಳೆಂಬ ನಿಯಮಗಳಿಗೆ ಅಧೀನ. ಇದು ಆ ತೆರನಾದ ನಿಯಮಾಧೀನವಲ್ಲ. ಆದ್ದರಿಂದ ಸ್ವತಂತ್ರ. ಬ್ರಹ್ಮ ಸೃಷ್ಟಿಯಲ್ಲಿ ಉಪ್ಪು ಹುಳಿ ಕಾರ ಸಿಹಿ ಕಹಿ ಮತ್ತು ಒಗರುಗಳೆಂಬ ಆರೇ ರಸಗಳು. ಕವಿ ಸೃಷ್ಟಿ ಯಲ್ಲಿ ಮಾತ್ರ ಶೃಂಗಾರಾದಿ ಒಂಬತ್ತು ರಸಗಳು. ಅವೂ ಹೃದ ಯಂಗಮವಾದವುಗಳು. ಬ್ರಹ್ಮಸೃಷ್ಟಿಯ ರಸಗಳು ಹಾಗಲ್ಲ. ಕವಿಸೃಷ್ಟಿಯಲ್ಲಿ ಬರುವ ದುಃಖರಸವೂ ಆನಂದದಾಯಕ. ಕಾವ್ಯ

ರಸಾಸ್ವಾದನೆಯಲ್ಲಿ ಒಂದೊಂದು ಕಡೆ ಕಣ್ಣೀರು ಒಸರಿದರೂ "ಅದು ಎಷ್ಟು ಚೆನ್ನಾಗಿತ್ತು ?" ಎಂದು ಆನಂದಿಸುತ್ತೇವೆ.

ಕಾವ್ಯವನ್ನು ಬರೆಯುವುದರ ಉದ್ದೇಶ ಕೀರ್ತಿ, ಧನಲಾಭ, ಲೋಕ ವ್ಯವಹಾರಜ್ಞಾನ, ಅಮಂಗಲನಿವೃತ್ತಿ ಮತ್ತು ಪರ ಮಾನಂದಲಾಭ. ಮಹಾಕವಿಗಳು ಇದಕ್ಕಾಗಿಯೆ ಮಹಾ ಕಾವ್ಯಗಳನ್ನು ರಚಿಸಿ ಅಮರರಾದರು.

ಕಾವ್ಯರಚನೆಗೆ ಪ್ರತಿಭೆ ಮುಖ್ಯ. ಅದು ಹೊಸ ಹೊಸ ದಾಗಿ ಉನ್ಮೇಷವಾಗುವ ಬುದ್ಧಿಶಕ್ತಿ ! ಈ ಪ್ರತಿಭೆಯು ಲೋ ಕಾನುಭವ ಮತ್ತು ಶಾಸ್ತ್ರಪರಿಜ್ಞಾನಗಳಿಂದ ಪರಿಪುಷ್ಟವಾಗಿ ಋಷಿ ಅಂಶ ಪಡೆದ ಕವಿಯ ಕರ್ಮವಾಗಿ ಅವತರಿಸುತ್ತದೆ.

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ ।
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ ॥

(ಅರ್ಧನೇಮಿ ಪುರಾಣ)

ಎಂಬ ಉಕ್ತಿಯು ಕಾವ್ಯದ ಮಹತ್ವವನ್ನು ಸ್ಪಷ್ಟಪಡಿ ಸುವುದಲ್ಲದೆ ಅದು ಅಸದೃಶವೆಂಬುದನ್ನೂ ನಿರೂಪಿಸಿದೆ.

"ಅಪಾರೇ ಕಾವ್ಯಸಂಸಾರೇ ಕವಿರೇಕಃ ಪ್ರಜಾಪತಿಃ ।
ಯಥಾಸ್ಮೈ ರೋಚತೇ ವಿಶ್ವಂ ತಥೈವ ಪರಿವರ್ತತೇ ॥"

ಅಂದರೆ ಕಾವ್ಯಸೃಷ್ಟಿಯಲ್ಲಿ ಕವಿಗಿರುವ ಅಸದೃಶ ಸ್ವಾತಂತ್ರ್ಯವನ್ನು ಈ ನುಡಿ ಸಮರ್ಥಿಸುತ್ತದೆ.

"ಶೃಂಗಾರೀಚೇತ್ಕವಿಃ ಕಾವ್ಯೇ ಜಾತಂ ರಸಮಯಂ ಜಗತ್।
ಸ ಏವ ವೀತರಾಗಶ್ಚೇತ್ ನೀರಸಂ ಸರ್ವಮೇವ ತತ್ ॥"

ಎಂಬ ಮಾತು ಕಾವ್ಯಕರ್ತನೆನಿಸಿದ ಕವಿಗೂ ವೀತರಾಗನಾದ ಅಧ್ಯಾತ್ಮನಿಷ್ಠನಿಗೂ ಇರುವ ಅಂತರವನ್ನು ಬಹುಸೂಕ್ಷ್ಮವಾಗಿ ನಿರೂಪಿಸಿದೆ. ವೀತರಾಗರಾದ ಮಹರ್ಷಿಗಳೂ ಸಹ ತಮ್ಮ ದಿವ್ಯ ಕೃತಿಗಳಾದ ಉಪನಿಷತ್ತುಗಳಲ್ಲಿ ಕಾವ್ಯೋಚಿತವಾದ ರಸಾನುಭವದ ಉದ್ಗಾರಗಳನ್ನು ಹೊರಪಡಿಸಿರುವುದು ಕಾವ್ಯರಸಗಳಜನಪ್ರಿಯತೆಯನ್ನು ಸಾರುತ್ತದೆ.

"ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಂ। ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದನಾಂತರಮ್ ॥
[ಬೃಹದಾರಣ್ಯಕ ೬-೩-೩೧]

ಅದಕ್ಕಾಗಿಯೇ ಕಾವ್ಯಪ್ರತಿಪಾದ್ಯ ರಸವನ್ನು ಬ್ರಹ್ಮಾಸ್ವಾದಸಹೋದರವೆನ್ನುವುದು. "ರಸೋ ವೈ ಸಃ" ಎಂಬ ಉಕ್ತಿ ಬ್ರಹ್ಮಾನಂದ ಮತ್ತು ಕಾವ್ಯಾನಂದಗಳಿಗಿರುವ ನಿಕಟ ಸಂಬಂಧವನ್ನು ಸ್ಥಾಪಿಸುತ್ತದೆ. ಮಹರ್ಷಿ ವೇದವ್ಯಾಸ ಮತ್ತು ವಾಲ್ಮೀಕಿಗಳು ಋಷಿಕವಿಗಳು. ಕಾಳಿದಾಸಾದಿಗಳು ರಸಋಷಿಗಳು. ಋಷಿಕವಿಗಳ ಕೃತಿ ಮಾತೃಸಮ್ಮಿತೆಯಾದರೆ ಉಳಿದ ರಸಸಂಹಿತೆಗಳು ಮಹಾಕಾವ್ಯಗಳು.

## ಮಹಾಭಾರತ ವಿಶ್ವಕಾವ್ಯೇತಿಹಾಸ.

ಮಹಾಭಾರತವು ವಿಶ್ವದ ಮಾನವಸಾಮಾನ್ಯದ ಅಂತ ರ್ಹೃದಯವನ್ನೇ ಚಿತ್ರಿಸಿದ ಒಂದು ಮಹಾಕಾವ್ಯೇತಿಹಾಸ. ಪ್ರತಿಯೊಬ್ಬ ಮಾನವನ ಹೃದಯಾಂತರಾಳದಲ್ಲಿ ಹೊರಹೊಮ್ಮುತ್ತಿರುವ ಸತ್ತ್ವ ರಜಸ್ತಮೋಗುಣಗಳ ವೈವಿಧ್ಯದಿಂದುಂಟಾಗುವ ಶೋಕ ಕಾಮ ಕ್ರೋಧ ಲೋಭ ಮೋಹಾದಿ ಅರಿಷಡ್ವರ್ಗಗಳು ಹಾಗೂ ಹರ್ಷ ಸತ್ಯ ಅಹಿಂಸೆ ಮೊದಲಾದ ಗುಣಗಳಿಗೆ ಮಾನವ ಹೃದಯದಲ್ಲಿ ನಡೆಯುವ ನಿತ್ಯ ತುಮುಲವೇ ಮಹಾಭಾರತ ಕಾವ್ಯ ಕಥಾವಸ್ತು. ಮಹಾಭಾರತದಲ್ಲಿ ಎದುರಾಗುವ ಮಹಾವ್ಯಕ್ತಿಗಳು ಸಾವಿರಾರು ವರ್ಷಗಳ ಹಿಂದೆ ಮಾತ್ರ ಇದ್ದಿರಬೇಕೆಂದು ಹೇಳಬೇಕಾಗಿಯೇನೂ ಇಲ್ಲ. ಅವರು ಎಂದೆಂದಿಗೂ ವಿಶ್ವದಲ್ಲಿ ಇದ್ದೇ ಇದ್ದಾರೆ; ಇರುವರು.

ಅವರು ಕೇವಲ ಭರತಖಂಡದಲ್ಲಿ ಮಾತ್ರ ಇರಬೇಕೆಂದೇನೂ ಅಲ್ಲ. ಎಲ್ಲಾ ಖಂಡಗಳಲ್ಲಿಯೂ ಮಹಾಭಾರತದ ಕಥೆ ನಡದೇ ಇದೆ. ಮೇಲಾಗಿ ಅದು ಕೇವಲ ಕೆಲವು ವರ್ಗಗಳಲ್ಲಿ ಮಾತ್ರ ನಡೆದ ಯುದ್ಧವೂ ಅಲ್ಲ. ಎಲ್ಲ ವರ್ಗೀಯ ವ್ಯಕ್ತಿಗಳಲ್ಲಿಯೂ ನಡೆದೇ ಇದೆ. ಮುಖ್ಯವಾಗಿ ಜ್ಞಾನ ಪ್ರಧಾನರಾದ ಮಾನವರೆಲ್ಲರ ಜೀವನದಲ್ಲಿಯೂ ಮಹಾಭಾರತದ ಕಥೆ ಹಾಸುಹೊಕ್ಕಾಗಿ ವ್ಯಾಪಿಸಿಕೊಂಡಿದೆ.

ಸಂಸಾರದಲ್ಲಿ ತೊಡಗಿ ಸುಖ ದುಃಖಗಳ ಸಂಕೋಲೆಗೆ ಸಿಲುಕಿ ಅರಿಷಡ್ವರ್ಗಗಳ ಉಪಟಳದಿಂದ ಬಸವಳಿದ ಮಾನವ

ನಿಗೆ, ಈ ಬಂಧನದಿಂದ ಪಾರಾಗುವ ಸಾಧಕನಿಗೆ ಹೃದಯ ದಲ್ಲಿ ಪ್ರತಿಧ್ವನಿಸುವ ಅಂತರ್ವಾಣಿ ಗೀತೆ.

ಗೀತೆಯ ಮೂರನೆಯ ಅಧ್ಯಾಯದ ಕಡೆಯಲ್ಲಿ ಭಗ ವಂತನು

ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥

(೩–೩೭)

ಎಂದು ಆರಂಭಿಸಿ ಕಾಮದ ಪ್ರಾಬಲ್ಯವನ್ನು ನಿರ್ದೇಶಿಸಿದ್ದಾನೆ.

ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥

[೩–೩೮]

ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥

[೩–೩೯]

ಕಾಮವು ಜ್ಞಾನವನ್ನು ಆವರಿಸಿ ಬೆಂಕಿಯು ಹೊಗೆಯಿಂ ದಲೂ ಕನ್ನಡಿಯು ಧೂಳಿನಿಂದಲೂ, ಗರ್ಭವು ಚರ್ಮದ ಪೊರೆ ಯಿಂದಲೂ ಆವರಿಸಿರುವಂತೆ ವ್ಯಾಪಿಸಿರುತ್ತದೆ.

ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥

[೩–೪೦]

ಕಾಮಕ್ಕೆ ಇಂದ್ರಿಯಗಳು, ಮನಸ್ಸು, ಬುದ್ಧಿಗಳು ಆಶ್ರಯಸ್ಥಾನ. ಈ ಕಾಮವು ಇಂದ್ರಿಯಾದಿಗಳಿಂದ ಜ್ಞಾನವನ್ನು ಆವರಿಸಿ ಮಾನವನನ್ನು ಮೋಹಗೊಳಿಸುವುದು.

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನವಿಜ್ಞಾನ ನಾಶನಮ್ ॥

[೩–೪೧]

ಆದ್ದರಿಂದ ಅರ್ಜುನ, ನೀನು ಮೊದಲು ಇಂದ್ರಿಯಗಳನ್ನು ನಿಗ್ರಹಿಸು. ಜ್ಞಾನ ಮತ್ತು ವಿಜ್ಞಾನಗಳನ್ನು ನಾಶಮಾಡುವ ಪಾಪಿಯಾದ ಈ ಕಾಮವನ್ನು ನಾಶಮಾಡು.

ಏವಂ ಬುದ್ಧೇಃ ಪರಂ ಬುಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ॥
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥

[೩–೪೩]

ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ ಶ್ರೇಷ್ಠ. ಆತ್ಮನ ಶ್ರೇಷ್ಠತೆಯನ್ನು ತಿಳಿದು ಆತ್ಮನಿಷ್ಠನಾಗಿ ದುರ್ಜಯವಾದ ಕಾಮಾದಿಗಳನ್ನು ಜಯಿಸು. ಮುಂತಾದ ಮಾತುಗಳು ಗೀತೆಯ ಹೋರಾಟವಾವುದೆಂಬುದನ್ನು ಸ್ಪಷ್ಟಪಡಿಸಿವೆ. ಆದ್ದರಿಂದ ವಿಶ್ವಮಾನವರ ಹೃದಯ ಹೋರಾಟವೇ ಮಹಾಭಾರತ ಕಾವ್ಯವಸ್ತು.

ಈ ಮಾತಿಗೆ ಗೀತೆಯೇ ಉತ್ತರವಿತ್ತಿದೆ. ಮಹಾಭಾರತದ ಭೀಷ್ಮಪರ್ವದ ಪ್ರಾರಂಭದಲ್ಲಿ ಗೀತೆ ಉಕ್ತವಾಗಿದೆ. ಯುದ್ಧೋ

ದ್ಯುಕ್ತವಾದ ಎರಡು ಪಡೆಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸಿದ ಶ್ರೀಕೃಷ್ಣನು ವಿಷಾದಕ್ಕೆ ಒಳಗಾದ ಅರ್ಜುನನಿಗೆ ಹೇಳಿದ ಸಂದೇಶವೇ ಭಗವದ್ಗೀತೆ.

ಪರಸ್ಪರ ವಿಜಿಗೀಷುಗಳಾಗಿ ಆವೇಶಾವಿಷ್ಟರಾಗಿ ಉಭಯ ಪಡೆಗಳೂ ಅಹಮಹಮಿಕೆಯಿಂದ ಪರಸ್ಪರ ರಕ್ತ ತರ್ಪಣಕ್ಕೆ ಹಾತೊರೆಯುತ್ತಿರುವಾಗ ಏಳುನೂರು ಪದ್ಯಗಳ ಹದಿನೆಂಟು ಅಧ್ಯಾಯಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಔಚಿತ್ಯದ ಬಗ್ಗೆ ಇದುವರೆಗಾಗಲೇ ಸಾಕಾದಷ್ಟು ಜಿಜ್ಞಾಸೆ ನಡೆದಿದೆ. ವಿಮರ್ಶಕರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿವೆ. ಚಾರಿತ್ರಕ ದೃಷ್ಟಿಯಿಂದ ವಿಮರ್ಶೆಮಾಡಿದಲ್ಲಿ ಅನೇಕ ಭಿನ್ನಾಭಿ ಪ್ರಾಯಗಳು ಮುಂದೆ ನಿಲ್ಲುವುದು ಸಹಜ. ಈ ಭಿನ್ನಾಭಿಪ್ರಾ ಯಗಳು ಗೀತೆಯು ಹಿಂದೆ ಸೂಚಿಸಿದಂತೆ ಅಂತರ್ವಾಣಿಯೆಂದು ಭಾವಿಸಿದರೆ ತಲೆದೋರಲಾರವು.

ಗೀತೆಯು "ಧರ್ಮಕ್ಷೇತ್ರೇ ಕುರುಕ್ಷೇತ್ರೇ" ಎಂಬ ಶ್ಲೋಕ ದಿಂದ ಆರಂಭವಾಗಿದೆ. ಇಲ್ಲಿ ಉಕ್ತವಾಗಿರುವ ಧರ್ಮಶಬ್ದವು 'ರಾಜಧರ್ಮ, ಪ್ರಜಾಧರ್ಮ, ಪತಿಧರ್ಮ, ಪತ್ನೀಧರ್ಮ ಎಂಬ ಲ್ಲಿರುವಂತೆ "ಕರ್ತವ್ಯ" ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. 'ಕುರುಕ್ಷೇತ್ರ' ಎಂಬಲ್ಲಿರುವ 'ಕುರು' ಶಬ್ದವೂ '[ ಡು ] ಕೃಯ್ ಕರಣೆ' ಎಂಬ ಧಾತ್ವರ್ಥವನ್ನು ಅನುಸರಿಸಿ ಕರ್ಮ ಎಂಬ ಅರ್ಥದ ವಿಧ್ಯರ್ಥಸೂಚಕವಾಗಿವೆ. ಇವೆರಡು ಶಬ್ದಗಳ ಕೊನೆಗೆ ಸೇರಿರುವ "ಕ್ಷೇತ್ರ" ಪದವು ತುಂಬಾ ಮಾರ್ಮಿಕವಾದ ಅರ್ಥ

ದಲ್ಲಿ ಪ್ರಯುಕ್ತವಾಗಿದೆ. ಏಕೆಂದರೆ ಮುಂದೆ ಹದಿಮೂರನೆಯ ಅಧ್ಯಾಯದಲ್ಲಿ ಭಗವಂತನೇ 'ಕ್ಷೇತ್ರ' ಶಬ್ದದ ನಿರ್ವಚನಮಾಡಿದ್ದಾನೆ. ಅಲ್ಲಿ ಕ್ಷೇತ್ರ ಮತ್ತು ಕ್ಷೇತ್ರಜ್ಞಪದಗಳ ಅರ್ಥ ಹೀಗಿವೆ.

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ "ಕ್ಷೇತ್ರಜ್ಞ" ಇತಿ ತದ್ವಿದಃ ॥

[೧೩-೧]

ನಮ್ಮ ಶರೀರವೇ ಕ್ಷೇತ್ರ. ಅದನ್ನು ತಿಳಿದವನೇ ಕ್ಷೇತ್ರಜ್ಞ.

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ।
ಕ್ಷೇತ್ರ ಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥

[೧೩-೨]

ಎಲೈ ಅರ್ಜುನ, ಕ್ಷೇತ್ರವೆಂದು ಹೆಸರಿರುವ ಸಮಸ್ತ ಶರೀರಗಳಲ್ಲಿ ನನ್ನನ್ನು ಕ್ಷೇತ್ರಜ್ಞನೆಂದು ತಿಳಿ. ಕ್ಷೇತ್ರ ಮತ್ತು ಕ್ಷೇತ್ರಜ್ಞರನ್ನು ಬಿಡಿ ಬಿಡಿಯಾಗಿ ವಿಮರ್ಶಿಸಿ ತಿಳಿದುಕೊಳ್ಳುವುದಕ್ಕೆ ಜ್ಞಾನವೆಂದು ಹೆಸರು ಎಂದು ಸ್ಪಷ್ಟಪಡಿಸಲಾಗಿದೆ.

ಕ್ಷೇತ್ರಭೂತವಾದ ಈ ಶರೀರದಲ್ಲಿ ಪಂಚಮಹಾಭೂತಗಳೂ, ಅಹಂಕಾರ ಬುದ್ಧಿ ಪ್ರಕೃತಿ ಹತ್ತು ಇಂದ್ರಿಯಗಳು, ಮನಸ್ಸು, ಐದು ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನಶಕ್ತಿ, ಧೃತಿ, ಅಗರ್ವ, ಆರಂಭ, ಅಹಿಂಸೆ, ಕ್ಷಮೆ,ಸರಳತೆ,ಗುರುಹಿರಿಯರ ಸೇವೆ, ಪವಿತ್ರತೆ, ಸ್ಥೈರ್ಯ,ಆತ್ಮಸಂಯಮ, ವಿಷಯವೈರಾಗ್ಯ, ನಿರಹಂಕಾರ, ಹುಟ್ಟು, ಸಾವು,

ಮುಪ್ಪುವ್ಯಾಧಿಗಳ ವ್ಯಸನ, ಪುತ್ರದಾರಾದಿಗಳಲ್ಲಿ ಅತ್ಯಾಸಕ್ತಿ ಇಷ್ಟಾನಿಷ್ಟಗಳಲ್ಲಿ ಸಮಭಾವ, ಭಗವಂತನಲ್ಲಿ ಅನನ್ಯಭಕ್ತಿ, ಏಕಾಂತವಾಸದಲ್ಲಿ ಅಭಿರುಚಿ, ಜನ ಸಂಸರ್ಗದಲ್ಲಿ ಸೇರದಿರುವಿಕೆ, ಆಧ್ಯಾತ್ಮಿಕಜ್ಞಾನವು ನಿತ್ಯವೆಂಬ ಅರಿವು, ಮತ್ತು ಆತ್ಮಸಂದ ರ್ಶನ ಇವುಗಳನ್ನು ತಿಳಿಯುವುದು ಜ್ಞಾನ. ಇದಕ್ಕೆ ವಿರುದ್ಧ ವಾದುದು ಅಜ್ಞಾನ ಎಂದು ಹೇಳಲಾಗಿದೆ.

ಮೇಲೆ ಹೇಳಿದ . ತನ್ನ ಉಪದೇಶವು ಮನಸ್ಸಿನಲ್ಲಿ ದೃಢ ವಾಗುವುದಕ್ಕಾಗಿ ಭಗವಂತನು ತನ್ನ ವಿಶ್ವರೂಪವನ್ನೇ ಅರ್ಜು ನನಿಗೆ ತೋರಿ ತಾನು ಸರ್ವವ್ಯಾಪಕನೆಂಬುದನ್ನು ತಿಳಿಯಪಡಿ ಸಿದ್ದಾನೆ.

ಇದರಿಂದ ನಮ್ಮ ಶರೀರವೇ ಕ್ಷೇತ್ರವೆಂದೂ, ಅದೂ "ಕುರು" ಎಂದರೆ ಕರ್ತವ್ಯ ಕ್ಷೇತ್ರವೆಂದೂ ವ್ಯಕ್ತವಾಗುತ್ತದೆ. " ಶರೀರಮಾದ್ಯಂ ಖಲು ಧರ್ಮಸಾಧನಂ " ಎಂಬ ಮಹಾಕವಿ ವಚನದಂತೆ ಧರ್ಮಸಾಧನೆಗೆ ಸಹಕಾರಿಯಾದ ಈ ದೇಹವೇ ಧರ್ಮಕ್ಷೇತ್ರ. ಧರ್ಮದ ನೆಲೆಗಟ್ಟಿನ ಮೇಲೆ ನಿಂತು ಕರ್ತವ್ಯ ಪರಿಜ್ಞಾನ ಮಾಡಿಕೊಡುವುದಕ್ಕಾಗಿಯೇ ಗೀತೆ ಆವಿರ್ಭವಿಸಿತು.

ಭಗವದ್ಗೀತೆ ಕೇವಲ ತಾತ್ತ್ವಿಕಗ್ರಂಥವಾಗದೆ ಚಾರಿತ್ರಕ ವಾಗಿದ್ದ ಪಕ್ಷದಲ್ಲಿ ಬಂಧುಬಾಂಧವರನ್ನು ಕೊಲ್ಲಲು ಹಿಂದೆಗೆದ ಅರ್ಜುನನಿಗೆ ಮೊದಲನೆಯ ವಿಷಾದ ಮತ್ತು ಸಾಂಖ್ಯ ಯೋಗಗಳ ನಿರೂಪಣವು ಮಾತ್ರ ಸಾಕಾಗಿತ್ತು. ಅಲ್ಲಿ ಆತ್ಮನ

ಸಿತ್ಯತ್ವ, ನಿರ್ಲಿಪ್ತತ್ವ, ಮತ್ತು ಕ್ಷತ್ರಿಯನ ಕರ್ತವ್ಯಗಳ ವಿವೇಚನೆಯಿದೆ. ಮುಂದೆ ವಿಸ್ತರಿಸಿರುವ ಆತ್ಮಬೋಧನೆಗೆ ಸಂಬಂಧಿಸಿದ ಹದಿನಾರು ಅಧ್ಯಾಯಗಳಿಗೆ ಪ್ರಸಕ್ತಿಯೇ ಕಾಣುವುದಿಲ್ಲ.



೩

## ಕೌರವ ಪಾಂಡವ ವಿಭಾಗ ಆತ್ಮಗುಣಗಳಲ್ಲಿ

ಪ್ರಾಯಃ ಮಹಾಭಾರತವು ಶಂತನು ಚಕ್ರವರ್ತಿಯ ಕತೆಯಿಂದ ಆರಂಭವಾಗುತ್ತದೆ. ಶಂತನು ಗಂಗಾದೇವಿಯರ ಸಂಬಂಧ, ಭೀಷ್ಮನ ಜನನ, ಸತ್ಯವತಿ-ಪರಾಶರರ ಸಂಬಂಧ, ಬಾದರಾಯಣನ ಜನನ, ಮುಂದೆ ಶಂತನು ಸತ್ಯವತಿಯನ್ನು ವರಿಸಿದ್ದು, ಭೀಷ್ಮಪ್ರತಿಜ್ಞೆ, ಚಿತ್ರವೀರ್ಯ ವಿಚಿತ್ರವೀರ್ಯರ ಜನನ, ವಿಚಿತ್ರವೀರ್ಯನ ವಿವಾಹ, ಅಂಬಿಕೆ ಅಂಬಾಲಿಕೆಯರ ವೈಧವ್ಯ, ಮೈದುನ ಬಾದರಾಯಣನಿಂದ ಗರ್ಭಧಾರಣ ಪಡೆದ ಸಂದರ್ಭಗಳು, ಆಯಾ ವನಿತೆಯರ ಮನಃ ಪರಿಪಾಕವನ್ನು ಅವಲಂಬಿಸಿ ಧೃತರಾಷ್ಟ್ರ ಪಾಂಡುಗಳ ಉತ್ಪತ್ತಿಯಾದುದು, ಪರಮ ಭಕ್ತಿಪರಳಾಗಿ ವ್ಯಾಸಮುನೀಂದ್ರನನ್ನು ಸೇವಿಸಿದ ದಾಸಿಯ ಗರ್ಭದಲ್ಲಿ ವಿದುರನುದಿಸಿದ ವಿಚಾರಗಳು ಮನಃಶಾಸ್ತ್ರದ ದೃಷ್ಟಿಯಿಂದ ತುಂಬಾ ಮನನೀಯವಾಗಿವೆ.

ಪ್ರಕೃತ ಮಹರ್ಷಿ ಬಾದರಾಯಣನ ಸಂಬಂಧದಲ್ಲಿ ವಿಮುಖಳಾಗಿ ಕಣ್ಣುಗಳನ್ನು ಮುಚ್ಚಿಕೊಂಡು ವರ್ತಿಸಿದ ಅಂಬಿಕೆ ತಮೋಭಿಭೂತ ರಜೋಗುಣವಶಳಾಗಿ ಅಹಂಕಾರದಿಂದ ಮಹರ್ಷಿಗೆ ಅಪಚಾರವೆಸಗಿದ್ದರಿಂದ ಅಜ್ಞಾನರೂಪಿಯಾದ ಹುಟ್ಟುಕುರುಡ ಧೃತರಾಷ್ಟ್ರನ ಅವತಾರವಾಯಿತು.

ತತ್ತ್ವಶಾಸ್ತ್ರದ ಪ್ರಕಾರ ಜ್ಞಾನವು ಕಣ್ಣಿಗೆ ಸಂಕೇತ. ಅಜ್ಞಾನವು ಅಂಧತ್ವದ ಗುರುತು. ಈ ದೃಷ್ಟಿಯಿಂದ ಅಜ್ಞಾನ ಪರವಶಳಾದ ಅಂಬಿಕೆಗೆ ಹುಟ್ಟುಕುರುಡನುದಿಸಿದುದು ಯುಕ್ತ. ಇನ್ನು ಮಹರ್ಷಿಯ ದಿವ್ಯತೇಜಸ್ಸಿಗೆ ಮಣಿದು, ಉದಾಸೀನ ವಲ್ಲದಿದ್ದರೂ ವಿನಯದ ಪರಾಕಾಷ್ಟತೆ ಹೊಂದಿ ವರ್ತಿಸಿದ್ದ ರಿಂದ ಬೆಳಚಿಕೊಂಡ ಮೈಯ ಅಂಬಾಲಿಕೆ ಶುದ್ಧ ಸತ್ವಎಂದರೆ ಪಾಂಡುವರ್ಣದ ಪಾಂಡುವಿಗೆ ತಾಯಾದಳು.

ಹೀಗೆ ಕೇವಲ ತಮೋಭಿಭೂತ ರಾಜಸ ಮತ್ತು ಕೇವಲ ಸತ್ವಗಳ ಪ್ರತೀಕರಾದ ಧೃತರಾಷ್ಟ್ರ ಮತ್ತು ಪಾಂಡುಗಳ ವಂಶ ವೃಕ್ಷವೂ ಇದೇ ಮೂಲದಿಂದ ಅವತರಿಸಿತು. ಇಂಥ ಧೃತರಾಷ್ಟ್ರನ ಅನುರೂಪ ಸತಿ ಗಾಂಧಾರಿ. ಕುಂತಿಗಿಂತ ಮೊದಲು ಪುತ್ರವತಿಯಾ ಗಲು ಬಯಸಿ ಆವೇಶ, ಅತ್ಯಾಸೆ, ಮೋಹಗಳಿಗೆ ವಶಳಾಗಿ ತಮೋ ಭಿಭೂತ ರಾಜಸ ಪ್ರಧಾನನಾದ ಪತಿಯಿಂದ ಪಡೆದ ಗರ್ಭದ ನಿರ್ಭೇದವೆಸಗಿದ್ದರಿಂದ ಉದಿಸಿದ ದುರ್ಭಗಸಂತಾನ ದುರ್ಯೋಧನಾದಿಗಳು. ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯ ಮೊದಲಾದ ಅರಿಷಡ್ವರ್ಗಗಳ ಜೊತೆಗೆ ಉದಿಸುವ ದುಷ್ಟಗುಣಗಳ ಅಸಂಖ್ಯ ಸಂತಾನ ಕೌರವ ಪಡೆ. ತಮಸ್ಸಿ ನಿಂದ ಚಿತ್ತ ಚಾಂಚಲ್ಯವುಂಟಾಗಲು ದುಷ್ಟ ಮನಸ್ಸಿನ ನೂರಾರು ರೂಪಗಳು ಅವತರಿಸುವುದು ಸಮಂಜಸವಾಗಿಯೇ ಇದೆ.

ಇತ್ತ ಶುದ್ಧ ಸತ್ತ್ವಸ್ವರೂಪನಾದ ಪಾಂಡು ಕುಂತಿಯಲ್ಲಿ ಪುತ್ರಲಾಭ ಪಡೆಯಲು ಅಡ್ಡವಾಗಿ ಬಂದ ಶಾಪವೃತ್ತಾಂತ

ತತ್ತ್ವಶಾಸ್ತ್ರ ದೃಷ್ಟಿಯಿಂದ ತುಂಬ ಮಹತ್ವವಾದುದು. ಶುದ್ಧ ಸತ್ತ್ವವು ಕಾಮರಹಿತವಾದುದು. ಅದಕ್ಕೆ ಭರ್ಜಿತ (ಹುರಿದ) ಬೀಜದಂತೆ ವಂಶವೃದ್ಧಿ ಮಾಡುವ ಅರ್ಹತೆಯಿಲ್ಲ. ಅದಕ್ಕಾಗಿ ಕುಂತಿ ಮಾದ್ರಿಯರು ಧರ್ಮಾದಿಗಳನ್ನು ಶರಣು ಹೋಗಬೇಕಾಯಿತು. ತತ್ತ್ವಶಾಸ್ತ್ರದ ಪ್ರಕಾರ ಮಹತ್ತು ಅಹಂಕಾರ ಚಿತ್ತ ಮನಸ್ಸು ಅಂತಃಕರಣಗಳು ಒಂದು ಗುಂಪು. ಚಿತ್ತವು ಮನಸ್ಸಿನ ಮೂಲಕ ಪ್ರವೃತ್ತಿಮಾರ್ಗ(ಇಳಿಯುವುದು)ದಲ್ಲಿ ಆಸಕ್ತವಾದಾಗ ಅದು ಪಂಚಭೂತಗಳಿಗೆ ಶರಣಾಗಲೇ ಬೇಕು.

"ಪರಬ್ರಹ್ಮಣಃ ಸಕಾಶಾತ್‌ಪ್ರಕೃತಿಃ ...... ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ, ಪೃಥಿವೀ, ಪೃಥಿವ್ಯಾ ಓಷಧಯಃ ಓಷಧಿಭ್ಯೋಽನ್ನಂ,ಅನ್ನಾದ್ರೇತಃ, ರೇತಸಃ ಪುರುಷಃ, ಸ ವಾ ಏಷ ಪುರುಷೋಽನ್ನರಸಮಯಃ — ಉಪನಿಷತ್ತು.

ಆತ್ಮತತ್ತ್ವದಿಂದ ಕ್ರಮವಾಗಿ ಆಕಾಶ, ಆಕಾಶದಿಂದ ವಾಯು. ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವೀತತ್ತ್ವಗಳು ಆವಿರ್ಭವಿಸುವುದು ಶಾಸ್ತ್ರಸಮ್ಮತವಾಗಿದೆ. ಇಲ್ಲಿ ಪ್ರವೃತ್ತಿಮಾರ್ಗಹಿಡಿದ ಚಿತ್ತ ಎಂದರೆ ಕುಂತಿಯು ಆಕಾಶತತ್ತ್ವದಲ್ಲಿ ಸೇರಿ ನಿರ್ಮಲ ಎಂದರೆ ಯಾವ ವಿಧವಾದ ಮನಃ ಕಷಾಯಗಳಿಗೂ ನಿಲುಕದ ಆಕಾಶ ಸ್ವರೂಪ ಧರ್ಮನಿಂದ ಯುಧಿಷ್ಠಿರನನ್ನು ಹಡೆದಳು. ಹಾಗೆಯೇ ವಾಯುದೇವನಿಂದ ಭೀಮ ಮತ್ತು ಜ್ಞಾನಸ್ವರೂಪನಾದ ಇಂದ್ರ ('ಇದಿ ಪರಮೈಶ್ವರ್ಯೇ' ಜ್ಞಾನವು ಅಗ್ನಿತತ್ತ್ವಕ್ಕೆ ಸಂಬಂಧಿಸಿದುದು) ನಿಂದ ಅರ್ಜುನನನ್ನು ಪಡೆ

ದಳು. ಪಾಂಡುವಿನ ದ್ವಿತೀಯ ಪತ್ನಿ ಮಾದ್ರಿಯು ಚಿತ್ತಸ್ವರೂಪಳಾದ ಕುಂತಿಯ ಕೃಪೆಯಿಂದ ಜಗತ್ತಿನ ಸಕಲ ಓಷಧಿಗಳಿಗೆ ಆಶ್ರಯಭೂತವೂ ಅವುಗಳ ಬೆಳವಣಿಗೆಗೆ ಮುಖ್ಯ ಕಾರಣವೂ ಎನಿಸಿದ ಪೃಥಿವೀ ಜಲತತ್ತ್ವಗಳ ಅಧಿದೇವತೆಗಳೆನಿಸಿದ ಅಶ್ವಿನೀ ಕುಮಾರರಿಂದ ನಕುಲ ಸಹದೇವರನ್ನು ಪಡೆದಳೆಂಬುದು ಸ್ವಾರಸ್ಯವೂ ಮನನೀಯವೂ ಆದ ಅಂಶವಾಗಿದೆ.

ಭಗವಂತನ ಅಷ್ಟಮೂರ್ತಿಗಳಲ್ಲೊಬ್ಬನಾದ ಸೂರ್ಯನ ಅನುಗ್ರಹಕ್ಕೆ ಪಾತ್ರಳಾದ ಕುಂತಿ ಅಕಾಲದಲ್ಲಿ ಪಡೆದ ಕರ್ಣನು ಆಕಾಶಾದಿ ಪಂಚಭೂತ ಬಾಹ್ಯನೆನಿಸಿದನು. ಆತನು ಕೇವಲ ತೇಜೋಗುಣ ವಿಶಿಷ್ಟನಾದರೂ ಅಕಾಲಸಂಜನಿತ ದೋಷದಿಂದ ಶುದ್ಧಜ್ಞಾನವಾಗಲು ಸಾಧ್ಯವಾಗದೆ ಔದಾರ್ಯಾದಿ ಸದ್ಗುಣ ಮೂರ್ತಿಯಾದರೂ ರಜಸ್ತಮೋಮಯ ಕೌರವ ಪಕ್ಷಪಾತಿಯೆನಿಸಿ ಅಗ್ನಿತತ್ತ್ವಜ ಪಾರ್ಥನಿಂದ ಹತನಾದನು.

ಇನ್ನು ಪಂಚಪಾಂಡವರಿಗೆ ಧರ್ಮಪತ್ನಿಯೆನಿಸಿದ ಅಗ್ನಿಜೆ ದ್ರೌಪದಿಯು ಅನುರೂಪ ವರಾನ್ವೇಷಣೆಯ ವಿಷಯದಲ್ಲಿ ಅಗ್ನಿತತ್ತ್ವಜ ಅರ್ಜುನ ವೀರ್ಯಲಭ್ಯಳಾದರೂ ಪಂಚಭೂತಗಳಿಗೆ ಸಂಬಂಧಿಸಿದವಳಾಗಬೇಕಾಯಿತು.ಅಗ್ನಿ ಎಂದರೆ ಜ್ಞಾನ.ಜ್ಞಾನಪುತ್ರಿ ಎಂದರೆ ಮತಿಯೇ. ಈ ಮತಿಗೆ ಸುಜ್ಞಾನದ ಸಂಬಂಧವಿರುವುದರಿಂದ ಅದು ಪಂಚಭೂತ,ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳಿಗೆ ಸಂಬಂಧಿಸಿದು (ಧರ್ಮಪತ್ನಿ)ದು ಯುಕ್ತ. ದ್ರೌಪ

ದಿಯ ಬಾಹ್ಯಪಂಚಪತಿತ್ವ ತತ್ತ್ವವು ಭಾರತಸಂಸ್ಕೃತಿಯ ಅನೂಚಾನ ಪದ್ಧತಿಗೆ ವಿರುದ್ಧವಾಗಿದ್ದರೂ ಮೇಲೆ ನಿರೂಪಿಸಿದ ಆತ್ಮಗುಣಸಮನ್ವಯ ದೃಷ್ಟಿಯಿಂದಲೇ ಸಮಂಜಸವೆನಿಸುತ್ತದೆ. ಆದ್ದರಿಂದ ಮಹಾಭಾರತ ವ್ಯಕ್ತಿಗಳು ಸಂಪೂರ್ಣವಾಗಿ ಬಾಹ್ಯ ಚಾರಿತ್ರಕಕ್ಕೆ ಸೇರಿದವರಲ್ಲವೆಂಬುದಕ್ಕೆ ಈ ಭಾಗ ಬಲವಾದ ನಿದರ್ಶನ. ಪುರುಷೋತ್ತಮಯೋಗದಲ್ಲಿ ಬರುವ ಭಗವದಾದೇಶವು ಈ ಅಂಶವನ್ನು ಹೀಗೆ ಸೂಚಿಸಿದೆ.

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

(೧೫-೯)

ಪಂಚಭೂತಗಳ ತನ್ಮಾತ್ರಗಳೆನಿಸಿರುವ ಶಬ್ದಸ್ಪರ್ಶರೂಪ ರಸಗಂಧಗಳೂ ಅವುಗಳ ಇಂದ್ರಿಯಗಳಾದ ಶ್ರೋತ್ರ ತ್ವಕ್ ಚಕ್ಷು ರಸನ ಘ್ರಾಣಗಳನ್ನು ಮತಿ (ಮನಸ್ಸು) ಯು ಆಶ್ರಯಿಸಿರುತ್ತದೆ. ಮತಿಯ ಮೂಲಕವೇ ಆತ್ಮನು ಆಯಾ ವಿಷಯಗಳನ್ನು ಅನುಭವಿಸುತ್ತಾನೆ.

ಜ್ಞಾನವಶವಾದ ಮತಿಯನ್ನು ಕಳಂಕ (ಅಪವಿತ್ರ) ಗೊಳಿಸಲು ತಮೋಜನಿತ ಕಾಮ ಕ್ರೋಧಾದಿಗಳು ಉದ್ಯುಕ್ತವಾಗುವ ಸಂದರ್ಭವು ದ್ರೌಪದೀ ವಸ್ತ್ರಾಪಹರಣದಂತಹ ಐತಿಹ್ಯಕ್ಕೆ ಎಡೆಯಾಗಿರಬೇಕು. ಅನನ್ಯಭಕ್ತೆಯಾದ ನಿರ್ಮಲಮತಿ(ದ್ರೌಪದಿ) ಗೆ ಆದ ಅಪಮಾನ ರಕ್ಷಣೆಗಾಗಿ ಒದಗಿದ ಭಗವದನುಗ್ರಹ ಯುಕ್ತ

ವೇ ಆಗಿದೆ. ಧರ್ಮದ್ರೋಹಿಯಾದ ಕೌರವ (ಅರಿಷಡ್ವರ್ಗ)ವರ್ಗ ವನ್ನು ಸಮೂಲನಾಶಮಾಡಲು ಧರ್ಮಾದಿಗಳು ಹಲವು ವರ್ಷ ವನವಾಸಮಾಡಿ ಆತ್ಮಶಕ್ತಿಯನ್ನು ಸಂಯಮದಿಂದ ಬೆಳೆಸಿಕೊಳ್ಳ ಬೇಕಾಯಿತು. ಆತ್ಮಪಾರಿಶುದ್ಧ್ಯದ ಹೊರತು ಕಾಮಾದಿಗಳನ್ನು ಗೆಲ್ಲಲು ಹೇಗೆ ಸಾಧ್ಯವಾದೀತು ?

ಪಂಚಭೂತ ಸಂಬಂಧಿಗಳಾದ ಪಾಂಡವರಲ್ಲಿ ಒಬ್ಬನಾದ ಮಾರುತಿ(ಭೀಮ)ಯು ವಾಯುತತ್ತ್ವಸಂಭವನೆಂದು ಹಿಂದೆಯೇ ಹೇಳಿದೆ. ಯೋಗಶಾಸ್ತ್ರದ ಪ್ರಕಾರ ಪ್ರಾಣಾಯಾಮವು ಅಷ್ಟಾಂಗ ಯೋಗದ ಮುಖ್ಯಭಾಗ. ಅದರಲ್ಲಿ ಬರುವ ಕುಂಭಕಯೋಗ (ವಾಯು ನಿರೋಧ)ದಿಂದ ಅರಿಷಡ್ವರ್ಗಾದಿ ರಿಪುವರ್ಗ ನಾಶವಾಗು ವುದು ಶಾಸ್ತ್ರೀಯವಾಗಿದೆ.

> ಅಲಿನಿಂದೊಡೆ ಸುಳಿದು ಸೂಸುವ
> ಗಾಳಿ ನಿಲುವುದು ಗಾಳಿ ನಿಲೆ ಮನ
> ಮೇಲೆ ನಿಲುವುದು ಮನವು ನಿಂದೊಡೆ
> ಬಿಂದು ನಿಂದಿಹುದು ।
>
> ಲೀಲೆಯಿಂದಾ ಬಿಂದು ನಿಂದೊಡೆ
> ಕಾಲ ಕರ್ಮವ ಗೆದ್ದು ಮಾಯೆಯ
> ಹೇಳ ಹೆಸರಿಲ್ಲೆನಿಸಬಹುದೈ
> ಬಸವ ಕೇಳೆಂದ ॥

[ಪ್ರ. ಲಿಂ. ಲೀಲೆ ೧೮–೨೨]

ತಮೋಸಂಜನಿತ ಕಾಮಾದಿ ರಿಪುವರ್ಗ (ಕೌರವಪಡೆ) ನಾಶವು ವಾಯುಪುತ್ರನಾದ ಭೀಮನಿಗೆ ಮೀಸಲಾದುದು

ಎಷ್ಟೊಂದು ಮನನೀಯವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಪ್ರಾಣಾಯಾಮ ಸಿದ್ಧಿಯಿಂದ ಅರಿಷಡ್ವರ್ಗದಲ್ಲಿ ಹಿರಿಯದಾದ ಕಾಮದ ಊರುಭಂಗವಾಗಲೇಬೇಕು.

ಭೀಷ್ಮ ದ್ರೋಣಾದಿ ಮಹಾವೀರರು ಉದಾತ್ತವ್ಯಕ್ತಿಗಳು; ಸತ್ವಾಧಿಕರು. ಆದರೂ ಅವರಿಗೆ ತಮೋಭಿಭೂತ ರಾಜಸ ಸಂಬಂಧ ಹೊಂದಿದ ದುರ್ಯೋಧನನ ಪಕ್ಷಹಿಡಿಯುವುದಕ್ಕೆ ತಮೋಭಿಭೂತರಾಜಸದ ಪ್ರಾಬಲ್ಯವೇ ಕಾರಣ. ರಾಜಸ ವಿಮಿಶ್ರಿತ ಸತ್ತ್ವವು ತಮೋಭಿಭೂತ ರಾಜಸಕ್ಕೆ ಅಧೀನವಾಗಿ ಅಪಮಾರ್ಗ ಹಿಡಿಯಬಲ್ಲದೆಂಬುದಕ್ಕೆ ಇದು ನಿದರ್ಶನ. ಈ ಅಂಶವನ್ನು ಮಹಾಕವಿ ಕಾಳಿದಾಸನು ಹೃದಯಂಗಮವಾಗಿ ಹೇಳಿದ್ದಾನೆ.

"ಅಪಥೇ ಪದಮರ್ಪಯಂತಿ ಹಿ
ಶ್ರುತವಂತೋಽಪಿ ರಜೋನಿಮೀಲಿತಾಃ"

(ರಘು ೯–೭೪)

"ವಿದ್ವಾಂಸರಾದರೂ ಸಹ ರಜೋಗುಣಾವೃತರಾದ ಪಕ್ಷದಲ್ಲಿ ಅವರು ಅಮಾರ್ಗದಲ್ಲಿ ಕಾಲಿಡುವರು"

ಆದರೆ ದೈಹಿಕವಾಗಿ ಈ ವ್ಯಕ್ತಿಗಳು ಕೌರವನ ಪಡೆಯಲ್ಲಿದ್ದರೂ ಅವರು ಸ್ವಭಾವತಃ ಸತ್ತ್ವಾಧಿಕರಾದ್ದರಿಂದ ಅವರ ಒಲವು ಪಾಂಡವರ ಕಡೆಯೇ ಇದ್ದುದು ಮಹಾಭಾರತದಲ್ಲಿ ಬಹುಸುಂದರವಾಗಿ ಪ್ರತಿಪಾದಿತವಾಗಿದೆ.

ಶುದ್ಧ ಸತ್ತ್ವಗುಣಸಂಭೂತರಾದ ಪಾಂಡವರಿಗೆ ಬುದ್ಧಿಯ ಸ್ಥಾನದಲ್ಲಿರುವ ಜ್ಞಾನಸ್ವರೂಪನಾದ ಶ್ರೀಕೃಷ್ಣನು ಸಹಾಯಕನಾದುದು ಅನಿವಾರ್ಯ. ಬುದ್ಧಿಗೂ ಅಗ್ನಿ(ಬೆಳಕು)ತತ್ತ್ವಜನಾದ ಅರ್ಜುನನಿಗೂ ಹಾರ್ದಿಕ ಸಂಬಂಧವುಂಟಾಗಿ ಅವರು ನರ ನಾರಾಯಣರೆನಿಸಿದರು. ಏಕೆಂದರೆ ಅಗ್ನಿ ತತ್ತ್ವಜ್ಞಾನದ ಪ್ರತೀಕ. ಬುದ್ಧಿತತ್ತ್ವ ಸಾಕ್ಷಾತ್ ಜ್ಞಾನಮಯ. ಅದೇ ಕಾವ್ಯ ಭಾಷೆಯಲ್ಲಿ ಭಾವ-ಮೈದುನರ ಸಂಬಂಧವನ್ನು ಕಲ್ಪಿಸಿತು.

ಎದುರಾಳಿಗಳಾದ ಅರಿಷಡ್ವರ್ಗ ಮತ್ತು ಅವಕ್ಕೆ ಬೆಂಬಲಿಗವಾದ ಅವಗುಣಗಳನ್ನು ಸದೆಬಡಿಯಲು ಸಾತ್ವಿಕ ಗುಣ ಸಂಜನಿತರಾದ ಧರ್ಮಾದಿಗಳಿಗೆ ಆವಶ್ಯಕವಾಯಿತು. ಅವರಲ್ಲಿ ಅಗ್ನಿ (ಜ್ಞಾನ) ತತ್ತ್ವಕ್ಕೆ ಸಂಬಂಧಿಸಿದ ಅರ್ಜುನನಿಗೆ ಅಜ್ಞಾನ ರೂಪವಾದ ಹೊಗೆಯುದಿಸುವುದು ಅನಿವಾರ್ಯ * ಅಂಥ ಹೊಗೆಯನ್ನು ಕಳೆದು ಜ್ಞಾನಪ್ರದೀಪವು ಪ್ರಜ್ವಲಿಸುವುದಕ್ಕೆ ಒಬ್ಬ ಪ್ರೇರಕ ಬೇಕು. ಅದಕ್ಕೆ ಪರಿಪೂರ್ಣ ಜ್ಞಾನಮಯನಾದ ಶ್ರೀಕೃಷ್ಣನ ಹೊರತು ಮತ್ತಾರು ಅರ್ಹರು ‡

ತಮೋಭಿಭೂತ ರಾಜಸ ಗುಣಸಂಜನಿತ ಕಾಮಸ್ವರೂಪನಾದ ದುರ್ಯೋಧನ ಮತ್ತು ಪೂರ್ವೋಕ್ತ ಅರ್ಜುನರು ಪೂರ್ಣ ಜ್ಞಾನಸ್ವರೂಪ ಶ್ರೀಕೃಷ್ಣನ ಸಹಾಯಬೇಡಲು ದ್ವಾರಕೆಗೆ ಹೋ

---

* ಧೂಮೇನಾವ್ರಿಯತೇ ವಹ್ನಿಃ (ಭ. ಗೀ. ೩-೩೮)

‡ ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ"

ದಾಗ ಕಾಮರೂಪ ಕೌರವ ಅಹಂಕಾರಾವಿಷ್ಟನಾಗಿ ಜ್ಞಾನದ ತಲೆ ಮೆಟ್ಟುವಂತೆ ಕೃಷ್ಣನ ಶಿರೋಭಾಗದಲ್ಲಿ ಕುಳಿತನು. ಅಂಥ ಅಹಂಕಾರಯುಕ್ತ ಕೌರವನ ಮೇಲೆ ಕೃಷ್ಣನ ದೃಷ್ಟಿ ಹೇಗೆ ಬಿದ್ದೀತು ? ಅಗ್ನಿತತ್ತ್ವಜ ಅರ್ಜುನ ಪಾದದ ಕಡೆ ಕುಳಿತನು. ಆದ್ದರಿಂದ ಕೃಷ್ಣನ ಮೊದಲ ದೃಷ್ಟಿ ಅವನ ಮೇಲೆ ಬಿತ್ತು. ದುರ್ಯೋಧನ ಕೃಷ್ಣನ ಚತುರಂಗಬಲವನ್ನು ಬೇಡಿದನು. ಅರ್ಜುನನು ಜ್ಞಾನರೂಪಿ ಕೃಷ್ಣನನ್ನುಮಾತ್ರ. ಇಲ್ಲಿ ಯೂ ಸಹ ರಾಜನೀತಿಯ ದೃಷಿಯಿಂದ ವಿಚಾರಮಾಡಿದರೆ ಅರ್ಜುನನು ರಾಜಕಾರಣಿಯಲ್ಲವೆಂದೇ ಹೇಳಬೇಕು. ಆದರೆ ಅಧ್ಯಾತ್ಮ ದೃಷ್ಟಿಯಿಂದ 'ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮ ಸಾತ್ ಕುರುತೇ' ಎಂಬ ಭಗವದುಕ್ತಿಯಂತೆ ನಮ್ಮ ಆಶ ಯವೇ ಸ್ಫುರಿಸುವುದಾಗಿದೆ.

ಜ್ಞಾನಸ್ವರೂಪಿಯಾದ ಕೃಷ್ಣನು ಸಾರಥಿಯಾಗುವುದರ ರಹಸ್ಯವೂ ತುಂಬ ಮಹತ್ವವಾದುದು. ಸಾರಥಿ ಎಂದರೆ ಪ್ರೇರಕ 'ಮಾರ್ಗದರ್ಶಕ' ಪುರೋಗಾಮಿ ಎಂದು ಅರ್ಥ. ಕೃಷ್ಣ ನು ಸಹೋದರರಲ್ಲಿ ಅಗ್ರಜನಾದ ಧರ್ಮರಾಜ ಭೀಮಾದಿಗಳಿಗೆ ಸಾರಥಿಯಾಗದೆ ಅರ್ಜುನನಿಗೆ ಮಾತ್ರ ಸಾರಥಿಯಾದುದರ ರಹಸ್ಯವೂ ಇದೇ ತತ್ತ್ವವನ್ನು ಅವಲಂಬಿಸಿರುವುದಾಗಿದೆ.

ದೈವಾಸುರ ಗುಣಗಳಿಗೆ ಸಂಕೇತರಾದ ಪಾಂಡವ ಕೌರವ ರಿಗೆ ನಡೆದ ಈ ಸಮರದಲ್ಲಿ ಬಾಂಧವ್ಯ ನಿಮಿತ್ತದಿಂದ ಸಂದೇಹ

ಗ್ರಸ್ತನಾದ ಅರ್ಜುನನಿಗೆ ಉಪದೇಶಿಸಿದ ಹದಿನೆಂಟು ಅಧ್ಯಾಯ ಗಳ ಗೀತೆ ಈ ವಿಚಾರವನ್ನೇ ಸ್ಪಷ್ಟಪಡಿಸಿದೆ.

ಒಬ್ಬನೇ ಜೀವನ ಕರ್ಮವಶದಿಂದ ಉದಿಸಿದ ತಾಮಸ ಮತ್ತು ಸಾತ್ತ್ವಿಕ ಗುಣಾವಳಿಗಳು ಸಹೋದರರೆನಿಸಿಕೊಂಡುದು ಯುಕ್ತವೇ. ಇಂಥ ಬಂಧು ಬಾಂಧವರನ್ನು ಕೊಲ್ಲಲು ಅರ್ಜುನ ಹಿಂತೆಗೆದನು. ಅಂಥವನಿಗೆ ಸದುಪದೇಶವೀಯಲು ಪೂರ್ಣ ಜ್ಞಾನಸ್ವರೂಪಿ ಕೃಷ್ಣನಲ್ಲದೆ ಮತ್ತಾರು ಅರ್ಹರು !

ಕಠೋಪನಿಷತ್ತಿನಲ್ಲಿಯೂ ಸಹ ಆಸುರೀ ಗುಣಗಳೊಂದಿಗೆ ನಡೆಸುವ ಆತ್ಮನ ಸಮರ ವರ್ಣನೆ ಈ ಅಂಶವನ್ನು ಸ್ಪಷ್ಟಪಡಿಸು ತ್ತದೆ.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥

ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾ್ ।
ಆತ್ಮೇಂದ್ರಿಯ ಮನೋಯುಕ್ತಃ ಭೋಕ್ತೇತ್ಯಾಹುರ್ಮನೀಷಿಣಃ ॥
(೧–೩–೩, ೪)

"ಆತ್ಮನೇ ರಥಿ ಎಂದರೆ ಜೀವ. ಶರೀರ ರಥ. ಬುದ್ಧಿಯು ಸಾರಥಿ ಮನಸ್ಸು ಹಗ್ಗ. ಇಂದ್ರಿಯಗಳು ರಥಕ್ಕೆ ಹೂಡಿದ ಕುದು ರೆಗಳು. ವಿಷಯಗಳು ಎಂದರೆ ಪಂಚೇಂದ್ರಿಯಗಳು ಬಯಸುವ ಹೂ, ಚಂದನ, ಸ್ತ್ರೀ ಮೊದಲಾದ ವಸ್ತುಗಳು. ಇವು ಇಂದ್ರಿ ಯಾಶ್ವಗಳನ್ನು ತಮ್ಮ ಕಡೆ ಆಕರ್ಷಿಸುತ್ತವೆ. ಆಗ ಆತ್ಮನು ಮನ

ಸ್ಸೆಂಬ ಹಗ್ಗದಿಂದ ಇಂದ್ರಿಯಾಶ್ವಗಳನ್ನು ಬಿಗಿ ಹಿಡಿದು ತಾನು ಸಾಧಿಸಲಿರುವ ಗುರಿಯ ಕಡೆ ಒಯ್ಯುತ್ತಾನೆ" ಎಂಬ ವರ್ಣನೆ ಮಾನವ ಶರೀರದಲ್ಲಿರುವ ಆಸುರೀಗುಣಗಳಿಗೂ ಮತ್ತು ದೈವೀ ಗುಣಗಳಿಗೂ ಆಗುತ್ತಿರುವ ಸಮರ(ಯುದ್ಧ)ದ ಪ್ರಸ್ತಾಪ ವನ್ನೇ ಮಾಡಿದೆ. ಇಲ್ಲದಿದ್ದಲ್ಲಿ ಇಲ್ಲಿ ವರ್ಣಿತವಾಗಿರುವ ರಥ ರಥಿ, ಸಾರಥಿ ಮುಂತಾದ ಯುದ್ಧೋದ್ಯುಕ್ತ ವೀರನಾಯಕನ ವರ್ಣನೆ ಬೇಕಿರಲಿಲ್ಲ. ಮತ್ತು ಋಗ್ವೇದದಲ್ಲಿ ಬರುವ

"ಸಪ್ತ ಯುಂಜತಿ ರಥಮೇಕಚಕ್ರಮೇಕೋ
ಅಶ್ವೋ ವಹಿತಿ ಸಪ್ತನಾಭಾ ।
ತ್ರಿನಾಭಿಚಕ್ರಮಜರಮನರ್ವಂ
ಯತೇಮಾ ವಿಶ್ವಾ ಭುವನಾಧಿ ತಸ್ಥುಃ ।

(ಋ ಮಂ. ೧. ೧೬೪. ೨)

ಎಂಬ ರಥವರ್ಣನೆಯೂ ಇದೇ ಅಂಶವನ್ನು ಸೂಚಿಸುವುದಾಗಿದೆ.

"ವಿಷಯೇಭ್ಯಃ ಇಂದ್ರಿಯಾಣಿ ಪ್ರತ್ಯಾಹೃತ್ಯ
ಇಂದ್ರಿಯೇಭ್ಯಃ ಮನಃ ಪ್ರತ್ಯಾಹೃತ್ಯ ಸಾಕ್ಷಾತ್ಕರ್ತವ್ಯೇ
ವಸ್ತುನಿ ಮನಃ ಪ್ರಣಿಧಾನಂ ಯೋಗಃ"

(ನ್ಯಾಯ ಬೋಧಿನೀ)

'ವಿಷಯಗಳಿಂದ ಇಂದ್ರಿಯಗಳನ್ನು ಹಿಂದಿರುಗಿಸಿ, ಇಂದ್ರಿಯ ಗಳಿಂದ ಮನಸ್ಸನ್ನು ಹಿಂದಿರುಗಿಸಿ, ಸಾಧಿಸಬೇಕಾದ ಗುರಿಯ ಕಡೆ ಮನಸ್ಸನ್ನು ಕೇಂದ್ರೀಕರಿಸುವುದೇ ಯೋಗ" ಎಂಬ ಉಕ್ತಿಯು ಇದನ್ನೇ ಸ್ಪಷ್ಟಪಡಿಸುವುದಾಗಿದೆ.

ಒಟ್ಟಿನಲ್ಲಿ ದೈವೀಗುಣಭೂಯಿಷ್ಠರಾದ ಪಾಂಡವರಿಗೆ ಆಸುರೀಗುಣ ಪರಿಪೂರ್ಣರಾದ ಕೌರವರೊಂದಿಗೆ ಯುದ್ಧ ಅನಿವಾರ್ಯವಾಯಿತು.

ಜ್ಞಾನವು ಎಂದಿಗೂ ದುಡುಕುವ ಸ್ವಭಾವದ್ದಲ್ಲ. ಜ್ಞಾನವೆಂದರೆ ಯುಕ್ತಾಯುಕ್ತ ವಿವೇಕ. ಆದುದರಿಂದಲೇ ಶ್ರೀಕೃಷ್ಣನು ತಾನು ಪಾಂಡವರ ಪಕ್ಷ ವಹಿಸಿದರೂ ಕೌರವನಲ್ಲಿ ಸಂಧಾನಕ್ಕೆ ಹೋಗಲು ಸಿದ್ಧನಾದ. ದೂತ ಕೃಷ್ಣನು ಐದು ಪ್ರಾಂತ, ಐದು ಗ್ರಾಮ, ಇಲ್ಲವೇ ಕಡೆಗೆ ಒಂದು ಗ್ರಾಮವನ್ನಾದರೂ ಕೊಡು ಎಂದು ಬೇಡಿದ. 'ಅಷ್ಟಕ್ಕೇ ಪಾಂಡವರು ಸಂತೃಪ್ತರಾಗುವರು' ಎಂದನು. ಸತ್ತ್ವವು ನಿತ್ಯಸಂತೃಪ್ತಿಯುಳ್ಳದು. ಆದ್ದರಿಂದಲೇ ಸಾತ್ತ್ವಿಕರಾದ ಪಾಂಡವರು ದ್ವಂದ್ವಾತೀತರೆನಿಸಿದರು. ಅವರಿಗೆ

"ಸುಖೇ ದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ"

ಸುಖ ದುಃಖಗಳು, ಲಾಭಾಲಾಭಗಳು, ಜಯಾಪಜಯಗಳು ಸಮ. ರಾಜ್ಯಸುಖವೆಷ್ಟು ಅವರಿಗೆ ಹಿತವಾಗಿತ್ತೋ ವನವಾಸವೂ ಅಷ್ಟೇ ಪ್ರಿಯವೆನಿಸಿತು. ಪಗಡೆಯಲ್ಲಿ ಗಳಿಸಿದ ಸೋಲು ದಿಗ್ವಿಜಯದಷ್ಟೇ ಮಹತ್ವದ್ದಾಗಿತ್ತು. ಕಟ್ಟಕಡೆಯ ವಿಜಯದಿಂದ ಅವರು ಪಟ್ಟ ಸಂತೋಷ ಅಷ್ಟರಲ್ಲೇ ಇದೆ. ಕರ್ತವ್ಯಕ್ಕಾಗಿ ಕಾದಿದರೇ ಹೊರತು ಅವರು ನೆಲದಾಸೆಯಿಂದಲ್ಲ. ಅನಿವಾರ್ಯವಾಗಿ ಆದ ಸಮರಕ್ಕಾಗಿ ಅವರು ಹರಿಸಿದ ಕಣ್ಣೀರ ಹೊಳೆ ಅಪಾರ.

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣ ಸುಖ ದುಃಖೇಷು ಸಮಃ ಸಂಗವಿವರ್ಜಿತಃ ॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ಮೇ ಪ್ರಿಯೋ ನರಃ ॥

(೧೨–೧೮, ೧೯)

ಎಂಬ ಭಕ್ತಿಯೋಗದ ಮಾತುಗಳು ಅವರಿಗೆ ಅಕ್ಷರಶಃ ಅನ್ವಯಿಸಿದ್ದವು.

ಪಾಂಡವರು ತಮಗೆ ಎಷ್ಟೋ ಅಪಾರ ಹಿಂಸೆ ಕೊಟ್ಟ ಕೌರವನಿಗೆ ಅನೇಕ ಸಲ ಕನಿಕರವನ್ನೇ ತೋರಿಸಿದ ಉದಾಹರಣೆಗಳು ಹೇರಳವಾಗಿವೆ. 'ಅನಿಕೇತಃ' ಎಂದರೆ ನಿಲ್ಲಲು ನೆಲೆಯಿಲ್ಲದೆ ದೇಶದೇಶ ಕಾಡು ಮೇಡು ಅಲೆದರೂ ಸ್ಥಿರಮತಿಗಳಾಗಿದ್ದರು. ಜ್ಞಾನಸ್ವರೂಪಿಯಾದ ಶ್ರೀಕೃಷ್ಣನಲ್ಲಿ ಅನನ್ಯಭಕ್ತರಾಗಿ ಆತ್ಮಾರ್ಪಣಮಾಡಿದರು. ಶೀತೋಷ್ಣ ಸುಖ ದುಃಖಗಳನ್ನು ಅವರು ಹೇಗೆ ಸಹಿಸಿದರೆಂಬುದಕ್ಕೆ ವನವಾಸ ದೃಷ್ಟಾಂತವೇ ಸಾಕು.

ಹೀಗೆ ಸತ್ವಭೂಯಿಷ್ಠನಾದ ವ್ಯಕ್ತಿಯು ತಾಮೋಭಿಭೂತರಿಂದ ಎಷ್ಟೇ ಕಿರುಕುಳಗಳನ್ನು ಅನುಭವಿಸಿದರೂ ಅವನು ಅಳುಕನು, ಅಲುಗನು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಭಗವದ್ಗೀತೆಯ ವಿಶ್ವರೂಪ ಸಂದರ್ಶನಕಾಲದಲ್ಲಿ ಭಗವಂತನು ಅಪ್ಪಣೆ ಕೊಡಿಸಿರುವ ಶ್ಲೋಕವೊಂದು ಈ ಅಂಶವನ್ನು ಬಹು ಸಮಂಜಸವಾಗಿ ನಿರೂಪಿಸುತ್ತದೆ.

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾನ್ಯಾನಪಿ ಯೋಧ ವೀರಾನ್ ।
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ।

[ಅ ೧೧–೩೪]

ಇಲ್ಲಿ ಮೊದಲನೆಯ ಪಾದಗಳನ್ನು

"ಕಾಮಂ ಚ ಕ್ರೋಧಂ ಚ ವಿಮತ್ಸರಂ ಚ
ಕೋಪಂ ತಥಾನ್ಯಾನಪಿ ದುರ್ಗುಣಾದೀನ್ ॥

ಎಂದು ಅರ್ಥೈಸಿದಾಗಲೇ ಶ್ರೀಕೃಷ್ಣನ ಮಾತು ಸಾರ್ಥಕವಾದೀತು. ಏಕೆಂದರೆ ಇದರ ಹಿಂದಿನ ಶ್ಲೋಕದಲ್ಲಿ "ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್" ಎಂದೂ ಈ ಶ್ಲೋಕದಲ್ಲಿ "ಮಯಾ ಹತಾನ್" ಎಂದೂ ಹೇಳಿ "ಈ ದ್ರೋಣ ಭೀಷ್ಮಾದಿಗಳನ್ನು ನಾನು ಮೊದಲೇ ಕೊಂದಿರುವೆನು. ಸತ್ತುಹೋದ ಇವರನ್ನು ಕೊಲ್ಲಲು ನೀನೇಕೆ ವ್ಯಥೆಪಡುವೆ ? ಕೊಲ್ಲು" ಎಂಬ ಮಾತುಗಳು ವ್ಯಾವಹಾರಿಕ ಅರ್ಥದಲ್ಲಿ ಅನನ್ವಯವಾಗುತ್ತವೆ.ಏಕೆಂದರೆ ಶ್ರೀಕೃಷ್ಣನು ದ್ರೋಣಾದಿಗಳನ್ನು ಕೊಂದದ್ದು ಎಲ್ಲಿಯೂ ಸ್ಪಷ್ಟವಾಗಿಲ್ಲ. ಆದರೆ ಆಂತರಿಕಾರ್ಥಮಾಡಿದಾಗಲೇ ಈ ಶ್ಲೋಕಾರ್ಥವು ಹೃದಯಚುಂಬಕವಾಗುತ್ತದೆ. ಶ್ರೀಕೃಷ್ಣನು ಹೇಳಿ ಕೇಳಿ ಪುರುಷೋತ್ತಮ ! ಅರಿಷಡ್ವರ್ಗಾದಿಗಳನ್ನು ಗೆದ್ದು ಗುಣಾತೀತನಾಗಿ ಪುರುಷೋತ್ತಮನಾದವನು. ಆದ್ದರಿಂದ ಆತನು ತನ್ನ

ಅನುಭವವನ್ನು ಅರ್ಜುನನಿಗೂ ಹೇಳಿ ಕಾಮಕ್ರೋಧಾದಿ ಅರಿ ಷಡ್ವರ್ಗವನ್ನು ದಮನಮಾಡಿ ಗುಣಾತೀತನಾಗಲು ಉಪದೇಶಿಸಿರುವುದು ಉಚಿತವೇ ಆಗುತ್ತದೆ. ‘ತನ್ನನ್ನು ಗೆದ್ದವನು ವಿಶ್ವವನ್ನೇ ಗೆಲ್ಲುವನು’ ಎಂಬ ನಾಣ್ಣುಡಿ ಇದನ್ನು ಸಮರ್ಥಿಸುತ್ತದೆ.*

ಇನ್ನು ಸಂಧಾನಕ್ಕಾಗಿ ತೆರಳಿದ ದೂತ ಶ್ರೀಕೃಷ್ಣನು ದರ್ಪದಿಂದ ಎದುರುಗೊಂಡು ವೈಭವ ಸತ್ಕಾರಕೂಟಕ್ಕೆ ಏರ್ಪಡಿಸಿದ ಕೌರವನ ಮನೆಗೆ ಹೋಗದೆ ಭಕ್ತನಾದ ವಿದುರನ ಮನೆಗೆ ಹೋದ ಸಂದರ್ಭ. ಅನಿರೀಕ್ಷಿತವಾಗಿ ಆಗಮಿಸಿದ ಕೃಷ್ಣನಿಗೆ ಭಕ್ತಿಯಿಂದ ವಿದುರನಿತ್ತ ಅಲ್ಪಕ್ಷೀರ, ಕುಡಿದುಳಿದು ಹೊಳೆಯಾಗಿ ಕೌರವನ ಸತ್ಕಾರ ಭವನದ ಮುಂದೆ ಹರಿದುದು ವ್ಯಾವಹಾರಿಕವಾಗಿ ಸಮಂಜಸವಾಗಲಾರದು. ಅಲ್ಲಿಯೂ ಆ ಸನ್ನಿವೇಶವು ಭಕ್ತ್ಯುದ್ರೇಕದ ಭಾವವನ್ನೇ ವ್ಯಂಜನಾವೃತ್ತಿಯಿಂದ ಪ್ರಚೋದಿಸುತ್ತದೆ. ಏಕೆಂದರೆ ಜ್ಞಾನವು ತಾಮಸಾಭಿಮುಖಿಯಲ್ಲ. ಅದು ಸತ್ತ್ವಾಧಿಕ ಭಕ್ತರೆಡೆಗೇ ಅಭಿಮುಖವಾಗುವ ಸ್ವಭಾವದ್ದು. ಮತ್ತು ಜ್ಞಾನರೂಪಿಯಾದ ಭಗವಂತನು ಭಕ್ತಿಯಿಂದ ಅರ್ಪಿಸಿದ

* ಮೇಲ್ಕಂಡ ಶ್ಲೋಕದ ಅಭಿಪ್ರಾಯವನ್ನು ಆಚಾರ್ಯ ವಿನೋಭಾವೆಯವರು ತಮ್ಮ ಸಂದರ್ಶನ ಕಾಲದಲ್ಲಿ ಶ್ರುತಪಡಿಸಿ ಈ ಅರ್ಥದಲ್ಲಿ ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದರು. ತಾ ೧೬–೯–೫೭

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

[೯–೨೬]

ಪತ್ರ ಪುಷ್ಪ ಫಲ ಇಲ್ಲವೆ ಒಂದಿಷ್ಟು ಉದಕ ಮುಂತಾದ ಯಾವುದನ್ನಾದರೂ ಭಕ್ತಿಯಿಂದಿತ್ತ ಪಕ್ಷದಲ್ಲಿ ಅದೇ ಪರಮ ಭೋಜ್ಯವೆಂದು ಭಾವಿಸುವನು ಪರಮಾತ್ಮ.

ಸಾರ್ವಭೌಮನ ಆಹ್ವಾನವನ್ನು ತಿರಸ್ಕರಿಸಿದ ದೂತ ಕೃಷ್ಣನು ದಾಸೀಪುತ್ರನ ಮನೆಯ ಆತಿಥ್ಯ ಸ್ವೀಕರಿಸಿ ಮಾಡಿದ ಅಪಮಾನ ತಡೆಯಲಳವೆ ? ಸಭೆಯಲ್ಲಿ ದೂತವಾಕ್ಯ ತಿರಸ್ಕೃತ ವಾಯಿತು. ಅಷ್ಟಕ್ಕೆ ಅದು ಮುಗಿಯಲಿಲ್ಲ. ಕೃಷ್ಣನ ಬಂಧನದ ವರೆಗೂ ಮುಂದುವರೆಯಿತು. ಶುದ್ಧ ಜ್ಞಾನವನ್ನು ತಮಸ್ಸೆಂದಿಗೂ ಆಕ್ರಮಿಸಲಾರದು. ಸೂರ್ಯನನ್ನು ಕತ್ತಲೆ ಕವಿಯಬಲ್ಲುದೆ? ಆದ್ದರಿಂದ ದೂತಬಂಧನ ಪ್ರಯತ್ನ ವಿಫಲವಾಯಿತು.
ಒಟ್ಟನಲ್ಲಿ ಯುದ್ಧ ಅನಿವಾರ್ಯವಾಯಿತು.

"ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ"

ಎಂದನು ಪಾರ್ಥ. ರಥವು ಎರಡು ಪೆರ್ಬಲಗಳ ಮಧ್ಯೆ ಬಂದು ನಿಂತಿತು. ತಾಮಸ ಭೂಯಿಷ್ಠರಾದ ಕೌರವರು ರಾಜಸಸಾತ್ವಿಕರೆನಿಸಿದ ಭೀಷ್ಮಾದಿಗಳೊಂದಿಗೆ ಸೇರಿದರು. ಪರಮಾತ್ಮ ಶ್ರೀ ಕೃಷ್ಣನ ಮಾಯಾಪ್ರಪಂಚಕ್ಕೆ ಸಂಬಂಧಿಸಿದ ಯಾದವ ಪಡೆಯೂ .ತಮೋಭಿಮುಖವಾಯಿತು. ಅರ್ಜುನ ಕೇಳಿದ–

ಯಾವದೇತಾನ್ನಿರೀಕ್ಷ್ಯೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥

(೧–೨೨)

ಯುದ್ಧೋದ್ಯುಕ್ತರಾಗಿ ನಿಂತಿರುವ ವೀರರನ್ನು ನೋಡುವೆನು. ಈ ರಣರಂಗದಲ್ಲಿ ನಾನು ಯಾರೊಡನೆ ಹೋರಾಡಬೇಕು. ?

ಯೋತ್ಸ್ಯಮಾನಾನವೇಕ್ಷ್ಯೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇಃ ಯುದ್ಧೇ ಪ್ರಿಯ ಚಿಕೀರ್ಷವಃ ॥

[೧–೨೩]

"ದುರ್ಬುದ್ಧಿಯಾದ ದುರ್ಯೋಧನನಿಗೆ ಯುದ್ಧದಲ್ಲಿ ಹಿತವೆಸಗಬೇಕೆಂದು ಯಾವ ಯಾವ ಯೋಧರು ಇಲ್ಲಿ ನೆರೆದಿದ್ದಾರೆ, ಅವರನ್ನು ತೋರಿಸು" ಎಂದ ಪಾರ್ಥನಿಗೆ ಶ್ರೀ ಕೃಷ್ಣನು "ಪಾರ್ಥ, ಪಶ್ಯೈತಾನ್ ಸಮವೇತಾನ್ ಕುರೂನ್" ಎಂದನು.

ಅಲ್ಲಿ ಅರ್ಜುನನು ಎದುರಿಗಿದ್ದ ಬಂಧು ಬಾಂಧವರನ್ನು ಕಂಡು ಧನುರ್ಬಾಣಗಳನ್ನು ಬಿಸುಟು ನಿರ್ವಿಣ್ಣನಾದನು. ಕೃಷ್ಣನ ಉಪದೇಶ ಅನಿವಾರ್ಯವಾಯಿತು. !



## ಗುಣತ್ರಯಗಳ ಸ್ವಭಾವವಿಶೇಷಗಳು.

ಗೀತೆಯಲ್ಲಿ ಗುಣತ್ರಯದ ವರ್ಣನೆ ಬಹು ಸುಂದರವಾಗಿ ವರ್ಣಿತವಾಗಿದೆ. ಅದಕ್ಕಾಗಿ ಕೆಲವು ಅಧ್ಯಾಯಗಳು ಮೀಸಲಾಗಿವೆಯೆಂದರೂ ಸಲ್ಲುವುದು. ಪ್ರಾರಂಭದಲ್ಲಿಯೇ ಭಗವಂತನು ಪ್ರಾಣಿಗಳ ಉತ್ಪತ್ತಿಗೆ ಕರ್ಮಾನುಗುಣವಾದ ತನ್ನ ಪ್ರಕೃತಿಯೇ ಕಾರಣವೆಂಬುದನ್ನು ನಿರ್ದೇಶಿಸಿ, ಸತ್ತ್ವರಜಸ್ಸು ಮತ್ತು ತಮಸ್ಸುಗಳು-

"ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ"

ಈ ಗುಣಗಳು ಅವಿನಾಶಿಯಾದ ದೇಹಧಾರಿಯನ್ನು ದೇಹದಲ್ಲಿ ಬಂಧಿಸುತ್ತವೆ ಎಂದಿದ್ದಾನೆ.

ಸತ್ವಗುಣವು ನಿರ್ಮಲವಾದುದರಿಂದ ಪ್ರಕಾಶಮಾನವಾಗಿಯೂ ಆರೋಗ್ಯಕರವಾಗಿಯೂ ಇದೆ. ಅದು ಜೀವಿಯನ್ನು ಸುಖ ಮತ್ತು ಜ್ಞಾನಗಳ ಸಂಬಂಧದಲ್ಲಿ ಬಂಧಿಸುತ್ತದೆ.

ರಜೋಗುಣವು ರಾಗರೂಪವಾದುದು. ಆದ್ದರಿಂದಲೇ ಅದು ಆಸೆಗೂ ಆಸಕ್ತಿಗೂ ಮೂಲ. ಅದು ದೇಹಧಾರಿಯನ್ನು ಕರ್ಮಪಾಶದಲ್ಲಿ ಕಟ್ಟುತ್ತದೆ.

ತಮೋಗುಣವು ಅಜ್ಞಾನದಿಂದ ಹುಟ್ಟುವುದು. ಅದು ಎಲ್ಲ ಜೀವಿಗಳನ್ನೂ ಮೋಹದಲ್ಲಿ ಬೀಳಿಸುತ್ತದೆ. ಮತ್ತು

ಜೀವಿಯನ್ನು ಪ್ರಮಾದ ಆಲಸ್ಯ ಮತ್ತು ಮೋಹ (ನಿದ್ರೆ) ಗಳ ಪಾಶದಲ್ಲಿ ಕಟ್ಟುತ್ತದೆ.

ಸತ್ತ್ವವು ಸುಖದಲ್ಲಿಯೂ ರಜಸ್ಸು ಕರ್ಮದಲ್ಲಿಯೂ ತಮಸ್ಸು ಜ್ಞಾನವನ್ನು ಮರೆಮಾಚಿ ಮರವೆಯಲ್ಲಿಯೂ ಮಾನವ ನನ್ನು ತಳ್ಳುತ್ತದೆ. ಸತ್ವಗುಣವು ವೃದ್ಧಿಯಾದಾಗ ಅದು ರಜಸ್ಸು ತಮಸ್ಸುಗಳನ್ನು ತಿರಸ್ಕರಿಸಿ ತನ್ನ ಕಾರ್ಯವನ್ನು ನೆರವೇರಿಸು ವುದು. ರಜಸ್ಸು ಅಧಿಕವಾದಾಗ ಅದು ಸತ್ವ ತಮಸ್ಸುಗಳನ್ನು ಅಲ್ಲ ಗಳೆದು ತನ್ನ ಕಾರ್ಯವನ್ನು ಮಾಡುವುದು. ಹಾಗೆಯೇ ತಮೋ ಗುಣವು ಅಧಿಕವಾದಾಗ ಅದು ಸತ್ವರಜೋಗುಣಗಳನ್ನು ಕೆಳಕ್ಕೆ ತುಳಿದು ತನ್ನ ಆಧಿಪತ್ಯ ಸ್ಥಾಪಿಸುವುದು.

ಸತ್ವಗುಣವು ಉದ್ರಿಕ್ತವಾಯಿತೆಂದರೆ ಕಿವಿ ಮೊದಲಾದ ಎಲ್ಲ ಇಂದ್ರಿಯಗಳೂ ವಿವೇಕದಿಂದ ವರ್ತಿಸುವವು. ಸದ್ವಿಷಯ ಗ್ರಹಣಮಾಡುವವು. ಮತ್ತು ತಾವು ಗ್ರಹಿಸುವ ಧರ್ಮ ವಿರುದ್ಧ ವಲ್ಲದ ವಿಷಯಗಳನ್ನು

> ಯತ್ಕರೋಷಿ ಯದಶ್ನಾತಿ ಯಜ್ಜುಹೋಷಿ ದದಾಸಿ ಯತ್ ।
> ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥

[೯—೨೭]

ಎಂಬ ಭಗವದುಕ್ತಿಯಂತೆ ಈಶ್ವರಾರ್ಪಿತಬುದ್ಧಿಯಿಂದ ಗ್ರಹಣಮಾಡಿ ವಿಷಯಾನುಭವ ಮಾಡುತ್ತಾನೆ ಜೀವಿ.

ರಜೋಗುಣೋದ್ರೇಕವಾದಾಗ ಲೋಭಾದಿಗಳಲ್ಲಿ ಆಸಕ್ತಿ, ನೂತನ ಕಾರ್ಯಾರಂಭ, ಏನೇನೋ ಮಾಡಬೇಕೆಂಬ ಅತ್ಯಾಸೆ ಮುಂತಾದ ಬಯಕೆಗಳು ಮೂಡುತ್ತವೆ.

ತಮೋಗುಣವು ಮಿತಿಮೀರಿದರೆ ಇಂದ್ರಿಯಮಾಂದ್ಯ, ಪ್ರವೃತ್ತಿರಾಹಿತ್ಯ ಮರವೆ ಅವಿವೇಕಗಳು ಉತ್ಪನ್ನವಾಗುತ್ತವೆ.

ಸತ್ತ್ವದಿಂದ ಸುಜ್ಞಾನ, ರಜಸ್ಸಿನಿಂದ ಲೋಭ, ತಮಸ್ಸಿನಿಂದ ಪ್ರಮಾದ ಮೋಹ ಅಜ್ಞಾನಗಳು ಉತ್ಪನ್ನವಾಗುತ್ತವೆ. ಸಾತ್ವಿಕರು ಮೇಲಕ್ಕೇರುತ್ತಾರೆ. ರಾಜಸರು ಮಧ್ಯದಲ್ಲಿರುತ್ತಾರೆ.ತಾಮಸಿಗಳಿಗೆ ಅಧೋಗತಿ ಸಿದ್ಧವೆಂದು ಹೇಳಲಾಗಿದೆ.

ಗೀತೆಯ ಕಡೆಯ ಅಧ್ಯಾಯದಲ್ಲಿಯೂ ಮತ್ತೆ ಇದೇ ಗುಣತ್ರಯದ ಜ್ಞಾನಸ್ವರೂಪವನ್ನು ನಿರ್ದೇಶಿಸಲಾಗಿದೆ.

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ।
ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥

(೧೮–೨೦)

ನಾನಾ ವಿಧವಾದ ಪ್ರಾಣಿ ಸಮೂಹದಲ್ಲಿ ಅಂತರ್ಯಾಮಿಯಾಗಿರುವ ಭಗವಂತನನ್ನು ಯಾವ ಜ್ಞಾನದಿಂದ ತಿಳಿಯಬಹುದೋ ಅದು ಸಾತ್ತ್ವಿಕಜ್ಞಾನ. ಬೇರೆ ಬೇರೆಯಾಗಿರುವ ಪ್ರತಿ ಶರೀರದಲ್ಲಿಯೂ ಆತ್ಮನು ಬೇರೆ ಬೇರೆ ಇರುವನೆಂಬ ಭೇದ ಜ್ಞಾನವು ರಾಜಸ. ಶರೀರವೇ ಆತ್ಮವೆಂಬ ಭಾವಾದಿಗಳು

ತಾಮಸ ಎಂದು ಸುಮಾರು ಇಪ್ಪತ್ತು ಶ್ಲೋಕಗಳಲ್ಲಿ ಈ ವಿಚಾರವನ್ನು ವರ್ಣಿಸಿದೆ.

ಕಡೆಗೆ ಭಗವಂತನು

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥

ಪ್ರಕೃತಿಯಲ್ಲಿ ಹುಟ್ಟಿದ ಈ ಮೂರು ಗುಣಗಳಿಂದ ಬಿಡುಗಡೆ ಹೊಂದಿರುವವನು ಮಾನವರಲ್ಲಾಗಲಿ ದೇವತೆಗಳಲ್ಲಾಗಲಿ ಯಾರೂ ಇಲ್ಲವೆಂದು ನಿರೂಪಿಸಿರುವ ಅಂಶವು ಮಾನವರಲ್ಲಿ ಅಡಗಿರುವ ಸತ್ವರಜಸ್ತಮೋರೂಪವಾದ ಗುಣಗಳ ಹೋರಾಟವನ್ನು ಬಹು ಚೆನ್ನಾಗಿ ಪ್ರತಿಪಾದಿಸಿದೆ.—

ಇಂಥ ಗುಣಗಳಲ್ಲಿ ಗುಣಕರ್ಮಸ್ವಭಾವದಿಂದ ಏರ್ಪಟ್ಟಿರುವ ಬ್ರಾಹ್ಮಣಾದಿ ವರ್ಣಗಳಲ್ಲಿ ಕ್ಷಾತ್ರಧರ್ಮವು

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮಸ್ವಭಾವಜಮ್ ॥

(೧೮—೪೩)

ಎಂಬಲ್ಲಿ ಶೌರ್ಯಾದಿ ಗುಣಗಳಿಂದ ಕೂಡಿದವನು ಕ್ಷತ್ರಿಯನೆಂದೂ, ಅವನು ಆಸುರೀ ಶಕ್ತಿಗಳನ್ನು ನಾಶಮಾಡಲು ಕಂಕಣಬದ್ಧನಾಗಬೇಕೆಂದೂ ನಿರೂಪಿಸಲಾಗಿದೆ.

ಗೀತೆಯಲ್ಲಿ ಉಕ್ತವಾಗಿರುವ ಚಾತುರ್ವರ್ಣ್ಯ ವ್ಯವಸ್ಥೆಯೂ ಸಹ ಇದೇ ಅಂಶವನ್ನು ಕುರಿತುದಾಗಿದೆ. ಆ ಬಗ್ಗೆ ಒಂದು ಅಂಶವನ್ನು ಸೂಚಿಸುವುದು ಅನಿವಾರ್ಯ.

ಕೆಲವರು ಬ್ರಾಹ್ಮಣಾದಿ ವರ್ಣಗಳು ಜನ್ಮದಿಂದ ಬಂದುವೆಂದು ಸಾಧಿಸುವರು. ಆದರೆ

"ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ
(೪-೧೫)

ಎಂಬಲ್ಲಿ ಉಕ್ತವಾಗಿರುವ ಮಾತು ಈ ಅರ್ಥವನ್ನು ಸ್ಪಷ್ಟಪಡಿಸಿದೆ. ಇಲ್ಲಿಯ ವರ್ಣವಿಭಾಗವನ್ನು ವ್ಯಾವಹಾರಿಕ ಜಾತಿಗಳಿಗೆ ವಿಂಗಡಿಸುವುದು ಪ್ರಾಮಾದಿಕವೆಂದೇ ನನ್ನಮತ. ಏಕೆಂದರೆ ಪ್ರತಿಮಾನವನಲ್ಲಿಯೂ ನಾಲ್ಕು ವಿಧವಾದ ಗುಣಕರ್ಮಗಳು ಇರುವುದು ಕಂಡುಬರುತ್ತದೆ. ನಮಗೆ ಆದರ್ಶರಾದ ದೇವತೆಗಳಲ್ಲಿಯೂ ಸಹ ಈ ಎಲ್ಲ ವಿಧವಾದ ಗುಣಗಳ ನಿದರ್ಶನಗಳಿವೆ.

ಪರಶಿವನು 'ಬ್ರಹ್ಮಾಧಿಪತಿ, ಬ್ರಹ್ಮಣೋಧಿಪತಿ' ಎಂದು ಶ್ರುತಿಗಳಲ್ಲಿ ಸ್ತುತನಾಗಿದ್ದಾನೆ. ಆದರೂ ಪಿನಾಕ ತ್ರಿಶೂಲಗಳನ್ನು ಹಿಡಿದು ದುಷ್ಟನಿಗ್ರಹ ಮಾಡಿರುವುದು ಮಾತ್ರವಲ್ಲದೆ ಜಗತ್ತಿನ ಲಯಕರ್ಮಕ್ಕೆ ಅಧಿಪತಿಯೆನಿಸಿದ್ದಾನೆ. ವಿಷ್ಣು ಕ್ಷಾತ್ರಾಂಶಸಂಭೂತನಾಗಿ ಅಸುರಾರಿಯಾದರೂ ಬ್ರಾಹ್ಮಣ ಪೂಜ್ಯನೆನಿಸಿದ್ದಾನೆ. ಮಹರ್ಷಿಗಳಲ್ಲಿ ಹೆಸರಾಂತ ಪರಶುರಾಮ

ದ್ರೋಣ ಕೃಪ ಅಶ್ವತ್ಥಾಮರು ಅಸ್ತ್ರಾಚಾರ್ಯರೆನಿಸಿದ್ದಾರೆ. ವಿಶ್ವಾಮಿತ್ರನು ಜನ್ಮತಃ ಕ್ಷತ್ರಿಯನಾದರೂ ತನ್ನ ಗುಣಕರ್ಮ ದಿಂದ ಬ್ರಹ್ಮರ್ಷಿಯಾಗಿ ಬ್ರಹ್ಮೋಪದೇಶಾರ್ಹವಾದ ಗಾಯತ್ರೀ ಮಂತ್ರದ್ರಷ್ಟೃವಾದನು. ಇಂಥ ನಿದರ್ಶನಗಳು ಅನಂತವಾಗಿವೆ.

ಆಧ್ಯಾತ್ಮ ದೃಷ್ಟಿಯಿಂದ ಪ್ರತಿಯೊಬ್ಬರಲ್ಲಿಯೂ ಮೇಲೆ ಕಂಡ ನಾಲ್ಕು ವಿಧವಾದ ಗುಣಕರ್ಮಗಳು ಇದ್ದೇ ಇವೆ. ನಮ್ಮ ಲ್ಲಿರುವ ಸಾತ್ವಿಕ ಗುಣಗಳನ್ನು ರೂಢಿಸಿಕೊಂಡು ಕಾಮಾದಿ ಅರಿಷಡ್ವರ್ಗಗಳನ್ನು ನಾವು ಜೈಸದಿದ್ದಲ್ಲಿ ಆತ್ಮ ಪತನವೇ ಆದೀತು ! ಅಂದ ಮೇಲೆ ಗೀತೆಯಲ್ಲಿ ಬರುವ ಚಾತುರ್ವರ್ಣ್ಯವು ಗುಣಕರ್ಮ ಸ್ವಭಾವ ಜನ್ಯ. ಮುಂದೆ ಹೇಳುವ ಆಯಾ ವರ್ಣೀ ಯರ ಕರ್ಮವಿಶೇಷಗಳು ಆಯಾ ಸ್ವಭಾವವುಳ್ಳವರ ವೃತ್ತಿ ನಿರೂಪಕಗಳು.

## ಗುಣಾತೀತತ್ತ್ವವೇ ಮಾನವನ ಗುರಿ

ಇಂಥ ಗುಣಗಳನ್ನು ವಶಪಡಿಸಿಕೊಂಡು ಸತ್ತ್ವಾಧಿಕನಾಗಿ ಕಡೆಗೆ ಈ ಮೂರು ಗುಣಗಳನ್ನು ಮೀರಿದವನು ಹಿಂದೆ ಹೇಳಿ ದಂತೆ ಗುಣಾತೀತನಾಗಿ ಪುರುಷೋತ್ತಮನೆನಿಸುವನು,

> ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ।
> ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ॥
>
> ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ।
> ಗುಣಾವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥

ಸಮದುಃಖ ಸುಖಸ್ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ।
ತುಲ್ಯ ಪ್ರಿಯಾಪ್ರಿಯೋ ಧೀರಃ ತುಲ್ಯನಿಂದಾತ್ಮಸಂಸ್ತುತಿಃ ॥

ಮಾನಾಪಮಾನಯೋಸ್ತುಲ್ಯಃ ತುಲ್ಯೋ ಮಿತ್ರಾರಿಪಕ್ಷಯೋಃ।
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥

(೧೪, ೨೨–೨೫)

ಗುಣಾತೀತನ ಸ್ಥಿತಿಗೆ ಬಂದ ಮಾನವನು ಸತ್ತ್ವರಜಸ್ತಮೋ ಗುಣಗಳಿಗೆ ಅತೀತನೆಂದೆಣಿಸುತ್ತಾನೆ. ಪ್ರಕಾಶ, ಪ್ರವೃತ್ತಿ ಮತ್ತು ಮೋಹಗಳು ಮೇಲೆ ಹೇಳಿದ ಮೂರು ಗುಣಗಳ ಸ್ವಭಾವಗಳು. ಇವುಗಳನ್ನು ದಾಟಿದ ಮೇಲೆ ಈ ಮೂರು ಗುಣಗಳು ಅವನಿಂದ ದೂರವಾಗುತ್ತವೆ. ಅಂದರೆ ಸುಖದುಃಖಗಳಲ್ಲಿ ಸಮಾನಭಾವ, ಆತ್ಮನಿಷ್ಠೆ, ಚಿನ್ನ ಮತ್ತು ಮಣ್ಣಿನ ಹೆಂಟೆಗಳಲ್ಲಿ ಸಮಬುದ್ಧಿ, ಪ್ರಿಯಾಪ್ರಿಯಗಳಲ್ಲಿ ಸಮತ್ವ, ಸ್ತುತಿ ನಿಂದೆಗಳಲ್ಲಿ ಸಮಾನತೆ, ಧೈರ್ಯ, ಮಾನಾಪಮಾನಗಳಲ್ಲಿ ಶತ್ರು ಮಿತ್ರರಲ್ಲಿ ಸಮಭಾವ, ಸಮಸ್ತ ಕರ್ಮಗಳಲ್ಲಿ ವಿರಕ್ತತೆಗಳು ಮೂಡಿದವನೇ ಗುಣಾತೀತನೆನಿಸುವನು. ಅವನೇ ಪುರುಷೋತ್ತಮನಾಗುವನು. ಅಂಥವನು ಭಗವದ್ಭಕ್ತಿಮಾಡಿ ಬ್ರಹ್ಮಮಯನಾಗುವನು. ಗುಣಾತೀತತ್ವವನ್ನು ಸಾಧಿಸುವುದೇ ಮಾನವನ ಗುರಿ. ಪುರುಷೋತ್ತಮತ್ವ ಸಾಧನೆಯೇ ಬ್ರಹ್ಮಭಾವದ ಅಡಿಗಲ್ಲು.

## ದೈವ ಮತ್ತು ಆಸುರ ಗುಣಗಳು

ಮಹಾಭಾರತದಲ್ಲಿ ಬರುವ ವ್ಯಕ್ತಿಗಳು ಹಿಂದೆ ಹೇಳಿದ ಸತ್ತ್ವರಜಸ್ತಮೋಗುಣವಿಮಿಶ್ರಣದಿಂದ ಆಯಾ ಗುಣ ಕರ್ಮ

ಸ್ವಭಾವಗಳನ್ನು ಪಡೆದಿರುವರೆಂದು ಹಿಂದೆಯೇ ಹೇಳಿದೆ. ಈ ಅಂಶವನ್ನು ಗೀತೆ ತನ್ನ ಹದಿನಾರನೆಯ ಅಧ್ಯಾಯದಲ್ಲಿ ಸುಂದರವಾಗಿ ವರ್ಣಿತವಾಗಿದೆ.

ಇದರಲ್ಲಿ ಬರುವ ಉಭಯ ವಿಧ ಗುಣ ವಿಭಜನೆಯನ್ನು ಕುರುಪಾಂಡವರಲ್ಲಿ ಬಹು ಸಮಂಜಸವಾಗಿ ಕಾಣಬಹುದು. ಈ ವರ್ಣನೆ ಕೇವಲ ಮಹಾಭಾರತದ ವ್ಯಕ್ತಿಗಳಲ್ಲಿ ಮಾತ್ರವಲ್ಲದೆ ನಮ್ಮಲ್ಲಿ ಹಾಗೂ ನಮ್ಮ ಸುತ್ತುಮುತ್ತಿನ ಜನತೆಯಲ್ಲಿ ನಾವು ಮನಗಂಡಿರುವ ವಿಶೇಷಗುಣಗಳು ಹೇಗೆ ಪ್ರತಿಬಿಂಬಿಸಿವೆ ಎಂಬುದನ್ನು ನಿರ್ದೇಶಿಸುತ್ತದೆ. ಮಹಾಭಾರತದ ವ್ಯಕ್ತಿಗಳು ಕೇವಲ ಆತ್ಮಗುಣಗಳ ಪ್ರತೀಕ ಮಾತ್ರ.

ದೈವೀ ಸಂಪತ್ತು — ಅಭಯ, ಅಂತಃಕರಣಶುದ್ಧಿ, ಜ್ಞಾನ, ನಿಷ್ಠೆ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಅಪೈಶುನ, ಭೂತದಯೆ, ಅಲೋಲುಪತೆ, ಮೃದುತ್ವ, ಮರ್ಯಾದೆ, ಸ್ಥೈರ್ಯ, ತೇಜಸ್ಸು, ಕ್ಷಮೆ, ಧೈರ್ಯ, ಶುಚಿತ್ವ, ಅದ್ರೋಹ, ಮತ್ತು ನಿರಭಿಮಾನ ಇವಿಷ್ಟು ದೈವೀಗುಣಗಳು. (೧೬–೧–೩)

ಇವು ಪಾಂಡುಪುತ್ರರಲ್ಲಿ ಹೇಗೆ ಮೂಡಿವೆ ಎಂಬುದಕ್ಕೆ ಒಂದು ನಿದರ್ಶನ ಸಾಕು. ಮಹಾಭಾರತ ವನಪರ್ವದಲ್ಲಿ ಬರುವ ಒಂದು ಸನ್ನಿವೇಶದಲ್ಲಿ ಯುಧಿಷ್ಠಿರನು ತನ್ನ ಲೋಕ ಬಾಂಧವ್ಯವನ್ನು ಹೀಗೆ ಹೇಳಿದ್ದಾನೆ.

ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋ ಭ್ರಾತಾ ದಯಾ ಸಖಾ।
ಶಾಂತಿಃ ಪತ್ನೀ ಕ್ಷಮಾಪುತ್ರಃ ಷಡೇತೇ ಮಮ ಬಾಂಧವಾಃ॥

ಸತ್ಯವೇ ತಾಯಿ, ಜ್ಞಾನವು ತಂದೆ, ಧರ್ಮ ಸೋದರರು, ದಯೆ ಗೆಳೆಯ, ಶಾಂತಿಯೇ ಪತ್ನಿ, ಕ್ಷಮೆಯೇ ಪುತ್ರರು, ಎಂಬ ಮಾತು ಅವರ ದೈವೀ ಸಂಪದ್ವಿಶಿಷ್ಟತ್ವವನ್ನು ಸಾರುತ್ತದೆ.

**ಆಸುರ ಸಂಪತ್ತು** — ದಂಭ, ದರ್ಪ, ಅಭಿಮಾನ, ಕ್ರೋಧ, ಪಾರುಷ್ಯ, ಅಜ್ಞಾನ, ಮುಂತಾದುವು ಆಸುರ ಸಂಪತ್ತು. ಆಸುರಸ್ವಭಾವದ ಜನರ ವರ್ಣನೆ–ಇವರಿಗೆ ಪ್ರವೃತ್ತಿಯೆಂದರೇನು, ನಿವೃತ್ತಿಯೆಂದರೇನು ಎಂಬುದು ತಿಳಿಯದು. ಅವರಿಗೆ ಶುಚಿತ್ವ, ಆಚಾರ, ಸತ್ಯಗಳಲ್ಲಿ ನಿಷ್ಠೆ ಇರುವುದಿಲ್ಲ. ಈಶ್ವರನೇ ಇಲ್ಲವೆಂದು ಅವರು ಸಾಧಿಸುವರು. ವಿಶ್ವ ವ್ಯವಹಾರವು ಕೇವಲ ಹೆಣ್ಣುಗಂಡಿನ ಕಾಮವ್ಯವಹಾರಕ್ಕೆ ಸಂಬಂಧಿಸಿದುದೆಂದು ಭಾವಿಸಿ ಶಿಶ್ನೋದರಪರಾಯಣರಾಗಿರುತ್ತಾರೆ.

ಹೃದಯ ವಿಹೀನರಾದ ಇವರು ಜಗತ್ತಿಗೆ ಶತ್ರುಗಳು ಪರಲೋಕ ಸಾಧಕವಾದ ಮೋಕ್ಷವನ್ನು ಬಯಸರು. ಅಲ್ಪ ಬುದ್ಧಿಗಳೂ ಉಗ್ರ ಕರ್ಮಿಗಳೂ ಆಗಿ ಪ್ರಪಂಚನಾಶಕ್ಕೆ ತೊಡಗುವರು. ಅತೃಪ್ತವಾದ ವಿಷಯ ಕಾಮನೆಗಳಿಂದ ತುಂಬಿದವರಾಗಿ ದಂಭ, ದುರಭಿಮಾನ, ಮದ ಮತ್ತು ಅಮಂಗಲಕರವಾದ ನಿರ್ಧಾರವುಳ್ಳವರಾಗಿ ಮೋಹದಿಂದ ದುಷ್ಟಕರ್ಮಗಳಲ್ಲಿ ತೊಡಗುತ್ತಾರೆ. ನಿರಂತರವೂ ಒಂದಲ್ಲ ಒಂದು ವಿಧವಾದ ವ್ಯಸನಗಳಿ

ಗೊಳಗಾಗಿ ನೂರಾರು ಆಸೆಗಳಲ್ಲಿ ಸಿಕ್ಕಿ ಬಿದ್ದು ವಿಷಯೋಪ ಭೋಗಕ್ಕಾಗಿ ಅನ್ಯಾಯದಿಂದ ಧನಾರ್ಜನೆ ಮಾಡಲಿಚ್ಛಿಸು ತ್ತಾರೆ.

"ಈದಿನ ಇಷ್ಟುಗಳಿಸಿದೆ. ಉಳಿದಿರುವ ಮನೋರಥಗಳನ್ನು ಪೂರ್ಣಮಾಡಿಕೊಳ್ಳುವೆನು. ಇಷ್ಟು ಸಂಪತ್ತು ನನ್ನಲ್ಲಿದೆ. ನಾಳೆ ಇನ್ನಷ್ಟು, ಮತ್ತಷ್ಟು ಗಳಿಸುವೆನು. ಇವನನ್ನು ತುಳಿದು ನಾಶ ಪಡಿಸಿದೆ. ಉಳಿದವರನ್ನೂ ನೆಲಸಮ ಮಾಡುವೆನು. ನಾನೇ ಈಶ್ವರ. ಸರ್ವಸಂಪನ್ನ. ನಾನೇ ಭೋಗಿ, ಸಿದ್ಧ, ಬಲಿಷ್ಠ, ಸುಖಿ, ನಾನೇ ಶ್ರೀಮಂತ, ಕುಲೀನ, ನನ್ನ ಸಮಾನರಿನ್ನಾರು ? ನಾನು ಯಜ್ಞಮಾಡುವೆನು. ಮಾರಕಹೋಮ ಮಾಡುವೆನು. ದಾನ ಮಾಡುವೆನು. ಅಕಾರ್ಯಸಾಧನೆಗಾಗಿ ಬೇಕಾದ್ದನ್ನು ಖರ್ಚುಮಾಡುವೆ. ಮೋಜುಮಾಡುವೆ ಎಂದು ಈ ಮೂಢರು ಭಾವಿಸುತ್ತಾರೆ. ಮತ್ತು ಅನೇಕವಿಧವಾದ ಚಿತ್ತ ಭ್ರಾಂತಿಯುಳ್ಳ ವರಾಗಿ ಮೋಹಜಾಲದಲ್ಲಿ ಸಿಕ್ಕಿಬಿದ್ದು ಕಾಮೋಪಭೋಗ ಗಳಲ್ಲಿ ಆಸಕ್ತರಾಗಿ ದುಃಖರೂಪವಾದ ನರಕದಲ್ಲಿ ಬೀಳುತ್ತಾರೆ.

ಸತ್ಕರ್ಮಗಳನ್ನು ಮಾಡುವೆನೆಂದು ಮತ್ತೊಬ್ಬರಿಂದ ಹೊಗಳಿಸಿಕೊಳ್ಳಲು ತಾವೇ ದೊಡ್ಡವರೆಂದೂ ಧನವಂತರು ಅಧಿಕಾರಿಗಳೆಂಬ ದುರಾಭಿಮಾನದಲ್ಲಿ ಮುಳುಗಿ ದಂಭದಿಂದ ಯತ್ನವಿಲ್ಲದೆ ಕೇವಲ ಹೆಸರುಗಳಿಸುವುಕ್ಕಾಗಿಯೇ ಯಜ್ಞಾದಿಗ ಳನ್ನು ಮಾಡುತ್ತಾರೆ.

ಅಹಂಕಾರ ಬಲ ದರ್ಪ ಕಾಮ ಕ್ರೋಧಗಳಿಗೆ ವಶ ರಾಗಿ ಪರನಿಂದೆಯಲ್ಲಿ ತೊಡಗಿ ಅವರಲ್ಲಿಯೂ ಇತರರಲ್ಲಿಯೂ

ಅಂತರ್ಯಾಮಿಯಾಗಿರುವ ಪರಮಾತ್ಮನನ್ನೇ ನಿಂದಿಸುವರು. ಎಂದರೆ ಈ ಮೂಢರು ಪರನಿಂದೆ ಮಾಡುವನೆಪದಿಂದ ಪರರಲ್ಲಿ ಅಡಗಿರುವ ಭಗವಂತನನ್ನೂ ದೂಷಿಸುತ್ತಾ ಪಾಪಕಟ್ಟಿಕೊಳ್ಳು ವರು.

[೧೬-೭-೧೮]

ಮೇಲಿನ ವರ್ಣನೆಯಲ್ಲಿ ಬಂದಿರುವ ಆಸುರೀಗುಣಗಳು ದುರ್ಯೋಧನ ಮೊದಲಾದವ್ಯಕ್ತಿಗಳಲ್ಲಿ ಎಷ್ಟು ಸಮಂಜಸವಾಗಿ ಹೊಂದಿಕೆಯಾಗುತ್ತವೆಯೆಂಬುದನ್ನು ಮನಗಾಣಬಹುದು. ಈ ಗುಣಗಳಿಗೆ ಮಹಾಭಾರತದ ಅನೇಕ ನಿದರ್ಶನಗಳನ್ನು ಉದ ಹರಿಸಬಹುದು. ಮಹಾಭಾರತ ಮಾತ್ರವೇ ಏಕೆ? ನಮಗೆ ಅನುಭವವಿರುವ ವ್ಯಕ್ತಿಗಳಲ್ಲಿಯೇ ಈ ಗುಣಗಳು ಹೇಗೆ ಹೊಂದಿ ಕೆಯಾಗುತ್ತವೆಯೆಂಬುದನ್ನು ನಾವೇ ಪರಿಶೀಲಿಸಬಹುದು.

ಈ ಸಂದರ್ಭದಲ್ಲಿ ಪಾಂಡವರು ದೈವೀ ಸಂಪದ್ವಿಶಿಷ್ಟ ರೆಂದು ಭಗವಂತನೇ ಸ್ಪಷ್ಟವಾಗಿ ಹೇಳಿದ್ದಾನೆ.

"ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ"

(೧೬-೫)

'ಎಲೈ ಅರ್ಜುನ, ನೀನು ಹೆದರಬೇಡ. ನೀನು ದೈವೀ ಸಂಪತ್ತನ್ನು ಪಡೆದು ಹುಟ್ಟಿರುವೆ"

ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶ್ರುಣು॥

ಅರ್ಜುನ, ಲೋಕದಲ್ಲಿ ದೈವೀ ಆಸುರೀ ಎಂದು ಎರಡು ವಿಧವಾದ ಸೃಷ್ಟಿಯಿದೆ. ದೈವೀ ಸಂಪತ್ತಿನ ವಿಸ್ತಾರ ವರ್ಣನೆ ಮಾಡಲಾಯಿತು. ಈಗ ಆಸುರೀ ವರ್ಣನೆ ಕೇಳು ಎಂಬ ಮಾತಿನಲ್ಲಿ ಅರ್ಜುನನು ದೈವೀಸಂಪತ್ತಿಗೆ ಸೇರಿದವನೆಂದು ಹೇಳಿ ಕೈಬಿಟ್ಟದ್ದರೂ ಕೌರವರು ಆಸುರೀ ಸಂಪತ್ತಿಗೆ ಸೇರಿದವರೆಂದು ಪರ್ಯಾಯವಾಗಿ ಹೇಳಿದಂತೆಯೇ ಆಗಿದೆ.

## ಆಸುರೀ ಗುಣಗಳಲ್ಲಿ ಹಿರಿಯದಾವುದು ?

ಭಗವಂತನು ಕಾಮ ಕ್ರೋಧ ಮತ್ತು ಲೋಭಗಳ ಪ್ರಾಬಲ್ಯವನ್ನು ಕುರಿತು

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥

(೧೬.೨೧)

ಆತ್ಮಪತನಕ್ಕೆ ಕಾರಣವಾದವು ಮೂರು ಗುಣಗಳು. ಕಾಮ, ಕ್ರೋಧ ಮತ್ತು ಲೋಭಗಳು. ಕಾಮವು ಆಸುರೀ ಗುಣಗಳಲ್ಲಿ ಹಿರಿಯದು. ಕಾಮವೇ ಎಲ್ಲ ಅವಗುಣಗಳ ಹೆದ್ದಾರಿ. ಈ ವಿಷಯನ್ನು ಭಗವಂತನು

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿಜಾಯತೇ ॥

(೨-೬೨)

ಅಂತರ್ಯಾಮಿಯಾಗಿರುವ ಪರಮಾತ್ಮನನ್ನೇ ನಿಂದಿಸುವರು. ಎಂದರೆ ಈ ಮೂಢರು ಪರನಿಂದೆ ಮಾಡುವನೆಪದಿಂದ ಪರರಲ್ಲಿ ಅಡಗಿರುವ ಭಗವಂತನನ್ನೂ ದೂಷಿಸುತ್ತಾ ಪಾಪಕಟ್ಟಿಕೊಳ್ಳು ವರು.

[೧೬–೭–೧೮]

ಮೇಲಿನ ವರ್ಣನೆಯಲ್ಲಿ ಬಂದಿರುವ ಆಸುರೀಗುಣಗಳು ದುರ್ಯೋಧನ ಮೊದಲಾದವ್ಯಕ್ತಿಗಳಲ್ಲಿ ಎಷ್ಟು ಸಮಂಜಸವಾಗಿ ಹೊಂದಿಕೆಯಾಗುತ್ತವೆಯೆಂಬುದನ್ನು ಮನಗಾಣಬಹುದು. ಈ ಗುಣಗಳಿಗೆ ಮಹಾಭಾರತದ ಅನೇಕ ನಿದರ್ಶನಗಳನ್ನು ಉದ ಹರಿಸಬಹುದು. ಮಹಾಭಾರತ ಮಾತ್ರವೇ ಏಕೆ? ನಮಗೆ ಅನುಭವವಿರುವ ವ್ಯಕ್ತಿಗಳಲ್ಲಿಯೇ ಈ ಗುಣಗಳು ಹೇಗೆ ಹೊಂದಿ ಕೆಯಾಗುತ್ತವೆಯೆಂಬುದನ್ನು ನಾವೇ ಪರಿಶೀಲಿಸಬಹುದು.

ಈ ಸಂದರ್ಭದಲ್ಲಿ ಪಾಂಡವರು ದೈವೀ ಸಂಪದ್ವಿಶಿಷ್ಟ ರೆಂದು ಭಗವಂತನೇ ಸ್ಪಷ್ಟವಾಗಿ ಹೇಳಿದ್ದಾನೆ.

"ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ"

(೧೬–೫)

'ಎಲೈ ಅರ್ಜುನ, ನೀನು ಹೆದರಬೇಡ. ನೀನು ದೈವೀ ಸಂಪತ್ತನ್ನು ಪಡೆದು ಹುಟ್ಟಿರುವೆ"

ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶ್ರುಣು॥

ಅರ್ಜುನ, ಲೋಕದಲ್ಲಿ ದೈವೀ ಆಸುರೀ ಎಂದು ಎರಡು ವಿಧವಾದ ಸೃಷ್ಟಿಯಿದೆ. ದೈವೀ ಸಂಪತ್ತಿನ ವಿಸ್ತಾರ ವರ್ಣನೆ ಮಾಡಲಾಯಿತು. ಈಗ ಆಸುರೀ ವರ್ಣನೆ ಕೇಳು ಎಂಬ ಮಾತಿನಲ್ಲಿ ಅರ್ಜುನನು ದೈವೀಸಂಪತ್ತಿಗೆ ಸೇರಿದವನೆಂದು ಹೇಳಿ ಕೈಬಿಟ್ಟಿದ್ದರೂ ಕೌರವರು ಆಸುರೀ ಸಂಪತ್ತಿಗೆ ಸೇರಿದವರೆಂದು ಪರ್ಯಾಯವಾಗಿ ಹೇಳಿದಂತೆಯೇ ಆಗಿದೆ.

## ಆಸುರೀ ಗುಣಗಳಲ್ಲಿ ಹಿರಿಯದಾವುದು ?

ಭಗವಂತನು ಕಾಮ ಕ್ರೋಧ ಮತ್ತು ಲೋಭಗಳ ಪ್ರಾಬಲ್ಯವನ್ನು ಕುರಿತು

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥

(೧೬.೨೧)

ಆತ್ಮಪತನಕ್ಕೆ ಕಾರಣವಾದವು ಮೂರು ಗುಣಗಳು. ಕಾಮ, ಕ್ರೋಧ ಮತ್ತು ಲೋಭಗಳು. ಕಾಮವು ಆಸುರೀ ಗುಣಗಳಲ್ಲಿ ಹಿರಿಯದು. ಕಾಮವೇ ಎಲ್ಲ ಅವಗುಣಗಳ ಹೆದ್ದಾರಿ. ಈ ವಿಷಯನ್ನು ಭಗವಂತನು

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿಜಾಯತೇ ॥

(೨-೬೨)

ವಿಷಯಗಳನ್ನು ಕುರಿತು ಚಿಂತನೆ ಮಾಡತೊಡಗಿದರೆ ಮೊದಲು ವಿಷಯಗಳಲ್ಲಿ ಆಸಕ್ತಿ ಉದಿಸುತ್ತದೆ. ಆಸಕ್ತಿಯಿಂದ ಕಾಮ (ಆಸೆ) ಹುಟ್ಟುತ್ತದೆ. ಆಸೆಯಿಂದ ಕ್ರೋಧ.

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿ ನಾಶಾತ್ ಪ್ರಣಶ್ಯತಿ ॥

(೨–೬೩)

ಕ್ರೋಧದಿಂದ ಮೋಹ (ಲೋಭ) ? ಮೋಹಾಧಿಕ್ಯದಿಂದ ಸ್ಮೃತಿ ವಿಭ್ರಮ. ಆದರಿಂದ ಬುದ್ಧಿಯ ನಾಶ. ತರುವಾಯ ಸರ್ವನಾಶ ವುಂಟಾಗುವುದೆಂಬುದನ್ನು ಇಲ್ಲಿ ಸ್ಮರಿಸುವುದು ಆವಶ್ಯಕ ಮೂರನೆಯ ಅಧ್ಯಾಯದ ೩೭–೩೮–೩೯–೪೦ ಶ್ಲೋಕಗಳು ಹೇಗೆ ಕಾಮದ ಪ್ರಾಬಲ್ಯವನ್ನು ಒತ್ತಿ ಹೇಳಿವೆಯೆಂಬುದನ್ನು ಈ ಗ್ರಂಥದ ಎರಡನೆಯ ಭಾಗದಲ್ಲಿ ಸೂಚಿಸಲಾಗುತ್ತದೆ.

ಕೌರವರಲ್ಲಿ ಪ್ರಾಯಿಕವಾಗಿ ದುರ್ಯೋಧನನು ಕಾಮಕ್ಕೂ ದುಶ್ಯಾಸನನು ಕ್ರೋಧಕ್ಕೂ ಸಂಕೇತವಾಗಿರುವರೆಂದು ಹೇಳ ಬಹುದು. ಇವರನ್ನು ಅಂದಂದಿಗೆ ಅನೇಕಾನೇಕ ವಿಧದಿಂದ ಪ್ರಲೋಭನಗೊಳಿಸುತ್ತಿರುವ ಶಕುನಿಯು ಲೋಭಕ್ಕೆ ಪ್ರತೀಕ ನೆನಿಸಿದ್ದಾನೆ. ಈ ಮೂವರ ಆಕರ್ಷಣೆಗೆ ಸಿಕ್ಕಿ ಉಳಿ ದೆಲ್ಲ ಕುರುಕುಲ ಮತ್ತು ಅವರ ಪಕ್ಷಪಾತಿಗಳು ಒಂದೊಂದು ವಿಧವಾದ ಹೃದಯ ದೌರ್ಬಲ್ಯದಿಂದ ಕಾಮದ ಹಿಡಿತಕ್ಕೆ ಸಿಕ್ಕಿ ದರು; ದುರ್ಯೋಧನನ ದೌರ್ಜನ್ಯದಲ್ಲಿ ನರಳಿದರು. ಇದನ್ನೇ

ನಮ್ಮ ಜೀವನಕ್ಕೆ ಅನ್ವಯಿಸಿಕೊಂಡರೆ ಕಾಮಪರವಶರಾದ ನರರು ಅನುಭವಿಸುತ್ತಿರುವ ಸ್ಥಿತಿ ಎಲ್ಲರಿಗೂ ವೇದ್ಯವೇ ಆಗುತ್ತದೆ.

ಇಂಥ ಆಸುರೀ ಶಕ್ತಿಗಳಿಗೆ ಒಳಗಾಗದಿರುವುದೇ ಆತ್ಮವಂತನ ಅಥವಾ ಜಿತೇಂದ್ರಿಯನ ಆದ್ಯ ಕರ್ತವ್ಯವೆಂದು ಎಚ್ಚರಿಸಲಾಗಿದೆ.

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥

(೨-೬೭)

ಇಂದ್ರಿಯಗಳಿಗೆ ವಶವಾಗಬಾರದು. ವಶವಾದವನು ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ಅಗಮ್ಯಸ್ಥಾನಕ್ಕೆ ಸೆಳೆದೊಯ್ಯಲ್ಪಡುವನು. ಅದಕ್ಕಾಗಿ

ತಸ್ಮಾದಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

(೨-೬೮)

ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ಇರುವವನು ಮಾತ್ರ ಆಸುರೀಗುಣಗಳನ್ನು ನಿಗ್ರಹಿಸಲು ಸಮರ್ಥನಾಗುತ್ತಾನೆ.

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥

(೩-೬)

ಬಾಹ್ಯೇಂದ್ರಿಯಗಳನ್ನು ಮಾತ್ರ ದಮನಮಾಡಿ ಮನಸ್ಸಿನಲ್ಲಿ ವಿಷಯಚಿಂತನೆ ಮಾಡುವುದಕ್ಕೆ ಮಿಥ್ಯಾಚಾರವೆಂದು ಹೆಸರು.

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥
(೩–೭)

ಯಾವನು ಮನಃಪೂರ್ವಕವಾಗಿ ಇಂದ್ರಿಯಗಳನ್ನು ವಶದಲ್ಲಿಟ್ಟು ಕೊಂಡು ಕರ್ಮೇಂದ್ರಿಯಗಳಿಂದ ಕರ್ತವ್ಯ ಕರ್ಮದಲ್ಲಿ ನಿರತ ನಾಗಿದ್ದರೂ ಅನಾಸಕ್ತನಾಗಿರುವನೋ ಅವನು ಪುರುಷಶ್ರೇಷ್ಠ ನೆನಿಸುವನು.

ಇಂಥ ಸುಜ್ಞಾನಿಯಾದ ಪುರುಷೋತ್ತಮನ ಸಂಗದಿಂದ ಅರ್ಜುನನು ಜಿತೇಂದ್ರಿಯನಾಗಿ ಅದೇ ಜಿತೇಂದ್ರಿಯತ್ವದಿಂದ ಪರಶಿವನ ಕೃಪೆಗೆ ಪಾತ್ರನಾಗಿ ಪಾಶುಪತಾದಿ ಮಹಾಸ್ತ್ರಗಳನ್ನು ಗಳಿಸಿ ಆಸುರೀಶಕ್ತಿಸ್ವರೂಪ ಕೌರವ ಪಡೆಯನ್ನು ಮರ್ದಿಸಲು ಸಮರ್ಥನಾದನು.

ಆಸುರೀ ಶಕ್ತಿಗಳ ಮೇಲಿನ ಹೋರಾಟ ಅನಿವಾರ್ಯ. ಒಟ್ಟಿನಲ್ಲಿ ದೈವ ಮತ್ತು ಆಸುರೀಶಕ್ತಿಗಳ ಹೋರಾಟ ನಿರಂತ ರವೂ ನಡೆದೇ ಇದೆ. ಭಗವಂತನು

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥
(೧೬–೧೯)

ನೀಚರೂ ಸುಜನದ್ವೇಷಿಗಳೂ ಲೋಕಕಂಟಕರೂ ಆದ ನರಾಧಮರನ್ನು ನಾನು ಮತ್ತೆ ಮತ್ತೆ ಆಸುರ ಯೋನಿಗಳಲ್ಲಿ ಹಾಕುವೆನು. ಆಸುರ ಯೋನಿಯನ್ನು ಹೊಂದಿದ ಇವರು ಜನ್ಮ ಜನ್ಮದಲ್ಲಿಯೂ ಮತ್ತೆ ಮತ್ತೆ ಅಧೋಗತಿಯನ್ನೈದುತ್ತಾ ನನ್ನನ್ನು ಪಡೆಯದೆ ಪತಿತರಾಗುವರು ಎಂದಿದ್ದಾನೆ.



೫

## ಉಪಸಂಹಾರ

ಆದುದರಿಂದ ಗೀತೆಯಲ್ಲಿ ಬರುವ ಪ್ರತಿಯೊಂದು ಉಪದೇಶವೂ ಯಾವುದನ್ನು ಮಾಡಬೇಕು ? ಯಾವುದನ್ನು ಮಾಡಬಾರದು ? ಎಂದು ಸಂದೇಹಗ್ರಸ್ತವಾದ ಸುಸಂಸ್ಕೃತ ಚಿತ್ತಕ್ಕೆ ಮಾಡಿದ ತತ್ತ್ವೋಪದೇಶವೆಂದು ಭಾವಿಸುವುದಾದರೆ ಗೀತೆ ಎಂದೆಂದಿಗೂ ಎಲ್ಲ ಮಾನವರ ಅಂತರ್ವಾಣಿಯಾಗಬಲ್ಲದು.

ಕುರು ಪಾಂಡವರ ಸೋದರ ಹೋರಾಟವು ಜೀವನೊಂದಿಗೆ ವಾಸನಾವಿಶೇಷದಿಂದ ಹುಟ್ಟಿದ ದೈವೀ ಮತ್ತು ಆಸುರೀ ಗುಣಗಳಿಗೆ ನಡೆಯುತ್ತಿರುವ ತುಮುಲಯುದ್ಧ. ಆ ಯುದ್ಧದಲ್ಲಿ ಕಾರಣಾಂತರಗಳಿಂದ ದುರ್ಬಲವಾಗಿ ಅಳುಕಿದ ಮನಸ್ಸಿಗೆ ವಿವೇಕವನ್ನು ಬೋಧಿಸಿದ ವಾಣಿ ಭಗವದ್ಗೀತೆ. ವಿಚಾರಪರನಾದ ಸಾಧಕನು ತನ್ನ ಈ ಅಂತರ್ವಾಣಿಯನ್ನು ಆಲಿಸಿ ಆತ್ಮಕಲ್ಯಾಣ ಮಾಡಿಕೊಳ್ಳಬೇಕು.

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥
ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥

(೬–೫–೬)

ಹೀಗೆ ನಮ್ಮಲ್ಲಿರುವ ಅಂತಶ್ಶತ್ರುಗಳನ್ನು ನಾವು ನಾಶಮಾಡುವುದರಿಂದ ತನ್ನಿಂದ ತಾನೇ ಉದ್ಧಾರವಾದಂತಾಗುವುದು.

ಹಾಗೆ ಮಾಡದಿದ್ದ ಪಕ್ಷದಲ್ಲಿ ತನ್ನ ಪತನಕ್ಕೆ ತಾನೇ ಕಾರಣನಾಗ ಬೇಕಾಗುವುದು. ತನಗೆ ತಾನೇ ಬಂಧು. ಈ ಸಮರಕ್ಕೆ ಉದ್ಯುಕ್ತ ನಾಗದಿದ್ದ ಪಕ್ಷದಲ್ಲಿ ಅವನು ತನಗೆ ತಾನೇ ಶತ್ರು.

ಯಾವನು ತನ್ನ ಬಲದಿಂದ ಮಾನಸಿಕ ದೌರ್ಬಲ್ಯವನ್ನು ಗೆಲ್ಲುತ್ತಾನೆಯೋ ಅವನಿಗೆ ಆತ್ಮ (ಭಗವಂತ) ವು ಬಂಧು. ಯಾವನು ಈ ಉದ್ಯಮದಲ್ಲಿ ಕೃತಕೃತ್ಯನಾಗುವುದಿಲ್ಲವೋ ಅವನು ತನಗೆ ತಾನೇ ಶತ್ರುವಾಗುವುದರಲ್ಲಿ ಏನು ಆಶ್ಚರ್ಯ!

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ॥

ಹೀಗೆ ಗೀತೆಯಲ್ಲಿ ಹೇಳಿರುವ ಸಂದೇಶವು ಆತ್ಮೋದ್ಧಾರ ಕ್ಕಾಗಿ ಉದ್ಯುಕ್ತನಾದವನು ಸುಖದುಃಖ, ಮಾನಾಪಮಾನ, ಶೀತೋಷ್ಣಾದಿಗಳಲ್ಲಿ ಸಮತೆಯನ್ನು ಸಾಧಿಸಿ ಪ್ರಶಾಂತನಾಗಿ ರುವನು. ಅಂಥವನಿಗೆ ಪರಮಾತ್ಮನು ಸನ್ನಿಹಿತನಾಗಿರುವನು ಎಂಬ ಮಾತು ಅಕ್ಷರಶಃ ಸತ್ಯ. ಆದ್ದರಿಂದ ಗೀತೆ ಪ್ರತಿಯೊ ಬ್ಬನ ಅಂತರ್ವಾಣಿಯೆಂಬುದನ್ನು ಘಂಟಾಘೋಷವಾಗಿ ಸಾರಿದೆ.

ಆದುದರಿಂದ ಪ್ರತಿಯೊಬ್ಬ ಮಾನವನೂ ಗೀತೆಯನ್ನು ಸಾವಧಾನದಿಂದ ಅಧ್ಯಯನ ಮಾಡಬೇಕು. ಅದನ್ನು ತನ್ನ ಅಂತರ್ವಾಣಿಯಾಗಿ ಮಾಡಿಕೊಳ್ಳಬೇಕು. ಸಾಧನೆಯ ಮೂಲಕ ಪರಮಾತ್ಮನ ಅಂತಃ ಪ್ರೇರಣೆಯನ್ನು ಅರಿತು ಜೀವನ ಸಂಗ್ರಾ ಮದಲ್ಲಿ ವಿಜಯಿಯಾಗಿ ಪರಮಾತ್ಮನಲ್ಲಿ ಅನನ್ಯ ಭಕ್ತನಾಗಿ ಕೃತಕೃತ್ಯನಾಗಬೇಕು.

ಓಂ ತತ್ಸತ್

೫

## ಉಪಸಂಹಾರ

ಆದುದರಿಂದ ಗೀತೆಯಲ್ಲಿ ಬರುವ ಪ್ರತಿಯೊಂದು ಉಪದೇಶವೂ ಯಾವುದನ್ನು ಮಾಡಬೇಕು ? ಯಾವುದನ್ನು ಮಾಡಬಾರದು ? ಎಂದು ಸಂದೇಹಗ್ರಸ್ತವಾದ ಸುಸಂಸ್ಕೃತ ಚಿತ್ತಕ್ಕೆ ಮಾಡಿದ ತತ್ತ್ವೋಪದೇಶವೆಂದು ಭಾವಿಸುವುದಾದರೆ ಗೀತೆ ಎಂದೆಂದಿಗೂ ಎಲ್ಲ ಮಾನವರ ಅಂತರ್ವಾಣಿಯಾಗಬಲ್ಲದು.

ಕುರು ಪಾಂಡವರ ಸೋದರ ಹೋರಾಟವು ಜೀವನೊಂದಿಗೆ ವಾಸನಾವಿಶೇಷದಿಂದ ಹುಟ್ಟಿದ ದೈವೀ ಮತ್ತು ಆಸುರೀ ಗುಣಗಳಿಗೆ ನಡೆಯುತ್ತಿರುವ ತುಮುಲಯುದ್ಧ. ಆ ಯುದ್ಧದಲ್ಲಿ ಕಾರಣಾಂತರಗಳಿಂದ ದುರ್ಬಲವಾಗಿ ಅಳುಕಿದ ಮನಸ್ಸಿಗೆ ವಿವೇಕವನ್ನು ಬೋಧಿಸಿದ ವಾಣಿ ಭಗವದ್ಗೀತೆ. ವಿಚಾರಪರನಾದ ಸಾಧಕನು ತನ್ನ ಈ ಅಂತರ್ವಾಣಿಯನ್ನು ಆಲಿಸಿ ಆತ್ಮಕಲ್ಯಾಣ ಮಾಡಿಕೊಳ್ಳಬೇಕು.

ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥
ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥

(೬–೫–೬)

ಹೀಗೆ ನಮ್ಮಲ್ಲಿರುವ ಅಂತಶ್ಶತ್ರುಗಳನ್ನು ನಾವು ನಾಶ ಮಾಡುವುದರಿಂದ ತನ್ನಿಂದ ತಾನೇ ಉದ್ಧಾರವಾದಂತಾಗುವುದು.

ಹಾಗೆ ಮಾಡದಿದ್ದ ಪಕ್ಷದಲ್ಲಿ ತನ್ನ ಪತನಕ್ಕೆ ತಾನೇ ಕಾರಣನಾಗ ಬೇಕಾಗುವುದು. ತನಗೆ ತಾನೇ ಬಂಧು. ಈ ಸಮರಕ್ಕೆ ಉದ್ಯುಕ್ತ ನಾಗದಿದ್ದ ಪಕ್ಷದಲ್ಲಿ ಅವನು ತನಗೆ ತಾನೇ ಶತ್ರು.

ಯಾವನು ತನ್ನ ಬಲದಿಂದ ಮಾನಸಿಕ ದೌರ್ಬಲ್ಯವನ್ನು ಗೆಲ್ಲುತ್ತಾನೆಯೋ ಅವನಿಗೆ ಆತ್ಮ (ಭಗವಂತ) ವು ಬಂಧು. ಯಾವನು ಈ ಉದ್ಯಮದಲ್ಲಿ ಕೃತಕೃತ್ಯನಾಗುವುದಿಲ್ಲವೋ ಅವನು ತನಗೆ ತಾನೇ ಶತ್ರುವಾಗುವುದರಲ್ಲಿ ಏನು ಆಶ್ಚರ್ಯ!

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ||

ಹೀಗೆ ಗೀತೆಯಲ್ಲಿ ಹೇಳಿರುವ ಸಂದೇಶವು ಆತ್ಮೋದ್ಧಾರ ಕ್ಕಾಗಿ ಉದ್ಯುಕ್ತನಾದವನು ಸುಖದುಃಖ, ಮಾನಾಪಮಾನ, ಶೀತೋಷ್ಣಾದಿಗಳಲ್ಲಿ ಸಮತೆಯನ್ನು ಸಾಧಿಸಿ ಪ್ರಶಾಂತನಾಗಿ ರುವನು. ಅಂಥವನಿಗೆ ಪರಮಾತ್ಮನು ಸನ್ನಿಹಿತನಾಗಿರುವನು ಎಂಬ ಮಾತು ಅಕ್ಷರಶಃ ಸತ್ಯ. ಆದ್ದರಿಂದ ಗೀತೆ ಪ್ರತಿಯೊ ಬ್ಬನ ಅಂತರ್ವಾಣಿಯೆಂಬುದನ್ನು ಘಂಟಾಘೋಷವಾಗಿ ಸಾರಿದೆ.

ಆದುದರಿಂದ ಪ್ರತಿಯೊಬ್ಬ ಮಾನವನೂ ಗೀತೆಯನ್ನು ಸಾವಧಾನದಿಂದ ಅಧ್ಯಯನ ಮಾಡಬೇಕು. ಅದನ್ನು ತನ್ನ ಅಂತರ್ವಾಣಿಯಾಗಿ ಮಾಡಿಕೊಳ್ಳಬೇಕು. ಸಾಧನೆಯ ಮೂಲಕ ಪರಮಾತ್ಮನ ಅಂತಃಪ್ರೇರಣೆಯನ್ನು ಅರಿತು ಜೀವನ ಸಂಗ್ರಾ ಮದಲ್ಲಿ ವಿಜಯಿಯಾಗಿ ಪರಮಾತ್ಮನಲ್ಲಿ ಅನನ್ಯ ಭಕ್ತನಾಗಿ ಕೃತಕೃತ್ಯನಾಗಬೇಕು.

ಓಂ ತತ್ಸತ್

## ಪರಿವಿಡಿ

# ಗೀತೆಯ ಅಂತರ್ವಾಣಿ.

## ೧

## ಅರ್ಜುನನ ಸಂದೇಹಗಳು.

ಗೀತೆಯನ್ನು ಸಾವಧಾನವಾಗಿ ಓದಿದಮೇಲೆ ಮೊದಲು ಜಿಜ್ಞಾಸುವಿಗೆ "ಅದರ ತಿರುಳು ಏನು?" ಎಂಬ ಪ್ರಶ್ನೆ ಯುದಿಸುವುದು ಸ್ವಾಭಾವಿಕ. ಸ್ಥೂಲವಾಗಿ ಗೀತೆ ಕರ್ತವ್ಯ ವಿಮುಖನಾದ ಪಾರ್ಥನಿಗೆ ಮಾಡಿದ ಕರ್ತವ್ಯೋಪದೇಶವೆಂದು ಭಾಸವಾಗುತ್ತದೆ. ಆ ಕರ್ತವ್ಯದ ತಿರುಳಾವುದು? ಎಂಬುದನ್ನು ಅರಸುವುದಕ್ಕೆ ಮೊದಲು ಅರ್ಜುನನು ಭಗವಂತನನ್ನು ಕೇಳಿದ ಪ್ರಶ್ನೆಗಳೆಷ್ಟು? ಮತ್ತು ಯಾವುವು? ಎಂಬುದನ್ನು ಸಂಗ್ರಹಿಸಿ ಅವಕ್ಕೆ ಭಗವಂತನ ಉತ್ತರಗಳೇನೆಂಬುದನ್ನು ಅವಲೋಕಿಸಿದಲ್ಲಿ ಗೀತೆಯ ಅಂತರ್ವಾಣಿಯ ಅರಿವಾಗುವುದು.

ಸುಮಾರು ಏಳುನೂರು ಶ್ಲೋಕಗಳಗೀತೆಯಲ್ಲಿ ಅರ್ಜುನನು ಹೇಳಿರುವ ಶ್ಲೋಕಗಳು ಒಟ್ಟು ಎಂಬತ್ತುನಾಲ್ಕು. ಇವುಗಳಲ್ಲಿ ಆತನು ಇಪ್ಪತ್ತೆರಡುಸಲ ಮಾತ್ರ ಪ್ರಶ್ನೆಮಾಡಿದ್ದಾನೆ. ಅವುಗಳನ್ನು ಹೀಗೆ ಸಂಗ್ರಹಿಸಬಹುದು.

### ಅರ್ಜುನನ ಪ್ರಶ್ನೆಗಳು :— (ಕರ್ಮಯೋಗ).

೧. ನಾನು ಯಾರೊಡನೆ ಯುದ್ಧಮಾಡಬೇಕು? ಅವರ ಪರಿಚಯಮಾಡಿಸು. (೧—೨೨,೨೩)

೨. ಸ್ವಜನರನ್ನು ನೋಡಿ ಮನಸ್ಸು ಅಳುಕುತ್ತಿದೆ. ವಿಪರೀತ ನಿಮಿತ್ತಗಳು ತೋರುತ್ತಿವೆ. ಬಂಧುವಧೆ ಪಾಪಕರ. ನನ್ನ ಜಯಕ್ಕಾಗಿ ಈ ರಕ್ತಪಾತಮಾಡಲಾರೆ ಯುದ್ಧದಿಂದ ಕುಲ ಕ್ಷಯ, ವರ್ಣಸಾಂಕರ್ಯ, ಪಿತೃಗಳಿಗೆ ದುರ್ಗತಿ, ನರಕ ಪ್ರಾಪ್ತಿ ಗಳುಂಟಾಗುತ್ತವೆ. ಆದ್ದರಿಂದ ನನಗೆ ಯುದ್ಧ ಬೇಡ. (೧ ೨೮–೪೬).

೩. ಪೂಜಾರ್ಹರಾದ ಭೀಷ್ಮದ್ರೋಣರನ್ನು ಹೇಗೆ ಕೊಲ್ಲಲಿ? ಧೃತರಾಷ್ಟ್ರನ ಮಕ್ಕಳನ್ನು ಸಾಯಿಸುವುದು ಹೇಗೆ? ನನಗೆ ದಾರಿ ತೋರಿಸು. (೨.೪–೮)

೪. ಸ್ಥಿತಪ್ರಜ್ಞನ ಚಿನ್ಹೆಗಳೇನು? ಅವನು ಹೇಗೆ ಮಾತ ನಾಡುತ್ತಾನೆ? ಹೇಗೆ ಕೂಡುತ್ತಾನೆ? ಹೇಗೆ ಚಲಿಸುತ್ತಾನೆ? (೨.೫೪)

೫. ಕರ್ಮಕ್ಕಿಂತ ಬುದ್ಧಿ(ಜ್ಞಾನ)ಯು ಶ್ರೇಷ್ಠವೆಂದು ಹೇಳುವುದಾದರೆ ನನ್ನನ್ನು ಈ ಘೋರ ಕರ್ಮಮಾಡಲು ಪ್ರೇರಿಸಿದ್ದೇಕೆ? ವಿಷಯಗಳನ್ನು ಬೆರಕೆಮಾಡಿ ಹೇಳಿದ್ದರಿಂದ ನನಗೆ ಸಂದೇಹವಾಗಿದೆ. ಕಲ್ಯಾಣಕಾರಕವಾದ ಒಂದು ದಾರಿ ಯನ್ನು ತೋರಿಸು? (೩.೧–೨)

೬. ತನ್ನ ಇಚ್ಛೆಇಲ್ಲದಿದ್ದರೂ ಮನುಷ್ಯನು ಯಾರ ಪ್ರೇರಣೆ ಯಿಂದ ಪಾಪವೆಸಗುತ್ತಾನೆ? (೩.೩೬)

೭. ನಿನ್ನಜನ್ಮ ಇಂದಿನದು, ವಿವಸ್ವತನ ಜನ್ಮ ಹಿಂದೆ ಆದುದು. ನೀನಿದನ್ನು ಮೊದಲೇ ಹೇಳಿದ್ದೆ ಎಂದು ಹೇಗೆ ನಂಬುವುದು? (೪.೪)

೮. ಕರ್ಮತ್ಯಾಗ ಮತ್ತು ಕರ್ಮಯೋಗಗಳನ್ನು ನೀನು ಹೇಳಿದೆ. ಇವೆರಡರಲ್ಲಿ ಯಾವುದು ಶ್ರೇಯಸ್ಕರ? (೫.೧)

೯. ನೀನು ಬೋಧಿಸಿದ ಸಾಮ್ಯಯೋಗವು ಸ್ಥಿರವಾದುದು. ನನ್ನ ಮನಸ್ಸೋ ಚಂಚಲವಾದುದು. ಮನಸ್ಸಿನ ಚಾಂಚಲ್ಯ ವನ್ನು ತಡೆಯುವುದು ಗಾಳಿ ಮೂಟೆಕಟ್ಟುವಷ್ಟು ದುಷ್ಕರ. ಆದ್ದರಿಂದ ಸಮತೆಯನ್ನು ಸಾಧಿಸುವುದು ನನಗೆ ಕಷ್ಟವಾಗಿದೆ. (೬–೩೩,೩೪)

೧೦. ಶ್ರದ್ಧಾಳುವಾದವನು ಅಕಸ್ಮಾತ್ ಯೋಗಭ್ರಷ್ಟನಾದರೆ ಅವನ ಗತಿಯೇನು? ಅವನು ಚದುರಿದ ಮೋಡಗಳಂತೆ ಉಭಯ ಭ್ರಷ್ಟನಾಗುವನಲ್ಲವೆ?

## ಭಕ್ತಿಯೋಗ.

೧೧. ಬ್ರಹ್ಮಸ್ವರೂಪವೆಂತಹುದು? ಅಧ್ಯಾತ್ಮ, ಕರ್ಮ, ಅಧಿ ಭೂತ, ಅಧಿದೈವ, ಅಧಿಯಜ್ಞವೆಂದರೇನು? ಮತ್ತು ಸಂಯಮಿ ಗಳು ಮೃತ್ಯುಸಮಯದಲ್ಲಿ ನಿನ್ನನ್ನು ಹೇಗೆ ಗುರುತಿಸುವರು? (೮.೧–೨)

೧೨. ದೇವ, ನೀನು ಪರಬ್ರಹ್ಮ, ಪರಂಧಾಮ, ಪರಮ ಪವಿತ್ರನು. ನಿನ್ನ ಬಗೆಗೆ ನಾರದಾದಿಮಹರ್ಷಿಗಳು ಬಗೆಬಗೆ

ಯಾಗಿ ಹೇಳುತ್ತಿದ್ದಾರೆ. ನೀನೂ ಹಾಗೆಯೇ ಹೇಳುತ್ತಿದ್ದಿ. ನಿನ್ನ ಸ್ವರೂಪವು ದೇವದಾನವರಿಗೂ ಅರಿಯದುದು. ನಿನ್ನ ವಿಭೂತಿಗಳಾವುವು? ವಿಸ್ತರಿಸಿ ಹೇಳು. (೧೦.೧೨–೧೮)

೧೩. ನಿನ್ನ ವಿಭೂತಿಗಳನ್ನು ಕೇಳಿ ಎಷ್ಟೋ ಮೋಹ ವಳಿಯಿತು. ಈಗ ನಿನ್ನ ಅವ್ಯಯವಾದ ಆ ಈಶ್ವರೀಸ್ವರೂಪವನ್ನು ಕೃಪೆಮಾಡಿ ತೋರಿಸು. (೧೧–೧,೪)

೧೪. ವಿಶ್ವರೂಪವರ್ಣನೆ. (೧೧,೧೫–೩೧)

೧೫. ವಿಶ್ವರೂಪವನ್ನು ನೋಡಿ ತಣಿದೆನು. ದೇವೇಶ, ಪ್ರಸನ್ನನಾಗು. ನಿನ್ನ ದಿವ್ಯಮಂಗಲಕರವಾದ ಮೊದಲಿನ ರೂಪವನ್ನು ತೋರಿಸು. (೧೧,೩೬–೪೬)

೧೬. ನಿನ್ನ ಮಾನುಷರೂಪವನ್ನು ನೋಡಿ ಮನಸ್ಸು ಶಾಂತವಾಯಿತು. (೧೧–೫೧)

೧೭. ನಿನ್ನನ್ನು ನಿರಂತರವೂ ಧ್ಯಾನಿಸುತ್ತಾ, ಉಪಾಸನೆ ಮಾಡುತ್ತಾ ಇರುವ ಭಕ್ತರಲ್ಲಿ ಯಾರು ಶ್ರೇಷ್ಠರು? (೧೨-೧)

## ಜ್ಞಾನಯೋಗ.

೧೮. ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ, ಜ್ಞೇಯ, ಎಂದರೇನು?* (೧೩–೧)

* ಈ ಪ್ರಶ್ನೆಯ ಶ್ಲೋಕವು ಪ್ರಕ್ಷಿಪ್ತವೆಂದು ಆಚಾರ್ಯ ವಿನೋಭಾಜಿಯವರ ಅಭಿಪ್ರಾಯ. ಏಕೆಂದರೆ ಇದು ಗೀತೆಯ ಏಳುನೂರು ಶ್ಲೋಕಗಳಲ್ಲಿ ಸೇರಿಲ್ಲ.

೧೯. ಗುಣಾತೀತನನ್ನು ಹೇಗೆ ಗುರ್ತಿಸುವುದು ? ಅವನ ಆಹಾರವೇನು ? ಅವನು ಗಣಾತೀತನಾದುದು ಹೇಗೆ ?

(೧೪–೨೧)

೨೦. ಶಿಷ್ಟಾಚಾರವನ್ನು ಬಿಟ್ಟು ಕೇವಲ ಶ್ರದ್ಧೆಯಿಂದ ಉಪಾಸನೆ ಮಾಡುವವರಿಗೆ ಯಾವ ಗತಿ ? ಅದು ಸಾತ್ತ್ವಿಕವೊ, ರಾಜಸವೊ ಅಥವಾ ತಾಮಸವೊ ? (೧೭–೧)

೨೧. ಸಂನ್ಯಾಸ ಮತ್ತು ತ್ಯಾಗಗಳ ರಹಸ್ಯವನ್ನು ಬೇರೆ ಬೇರೆ ತಿಳಿಯಬಯಸಿದ್ದೇನೆ. (೧೮–೧)

೨೨. ಮೋಹವಳಿಯಿತು. ಸಂದೇಹ ಪರಿಹಾರವಾಯಿತು. ನೀನು ಹೇಳಿದಂತೆ ಮಾಡುವೆನು. (೧೮–೭೩)

ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳನ್ನು ಕ್ರಮವಾಗಿ ಕರ್ಮಷಟ್ಕ, ಭಕ್ತಿ (ಉಪಾಸನಾ) ಷಟ್ಕ ಮತ್ತು ಜ್ಞಾನ ಷಟ್ಕವೆಂದು ವಿಂಗಡಿಸುತ್ತಾರೆ. ಇವುಗಳಲ್ಲಿ ಮೊದಲನೆಯ ಕರ್ಮಷಟ್ಕದಲ್ಲಿ ಹತ್ತುಸಲವೂ, ಭಕ್ತಿಷಟ್ಕದಲ್ಲಿ ಏಳುಸಲವೂ, ಜ್ಞಾನಷಟ್ಕದಲ್ಲಿ ಐದು ಅಥವಾ ನಾಲ್ಕು ಸಲವೂ ಅರ್ಜುನನು ಪ್ರಶ್ನಿಸಿದ್ದಾನೆ.

ಇವುಗಳಲ್ಲಿ ಮೊದಲನೆಯ ಮೂರು ಪ್ರಶ್ನೆಗಳು ಕೇವಲ ಎದುರಾಳಿಗಳ ಪರಿಚಯ ಮತ್ತು ಯುದ್ಧವು ಅಯುಕ್ತವೆಂಬ ಒಂದೇ ವಿಷಯವನ್ನು ಕುರಿತವುಗಳು. ಇನ್ನು ವಿಶ್ವರೂಪದ ಬಗ್ಗೆ

ಪ್ರಶ್ನಿಸಿದ ೧೩,೧೪,೧೫,೧೭ ನೆಯ ಪ್ರಶ್ನೆಗಳು ಕೇವಲ ವಿಶ್ವರೂಪ ಪ್ರದರ್ಶನ ಮಾತ್ರದಿಂದಲೇ ಉತ್ತರಿಸಲಾಗಿರುವುದರಿಂದ ಅವನ್ನು ಪ್ರಶ್ನೆಗಳ ಗುಂಪಿಗೆ ಸೇರಿಸಬೇಕಾಗಿಲ್ಲ. ಅದರಂತೆ ಕಡೆಯ ಪ್ರಶ್ನೆಯೂ ಅಂಗೀಕಾರ ಸೂಚಕವಾದ್ದರಿಂದ ಅದೂ ಪ್ರಶ್ನೆಯಲ್ಲ. ಇನ್ನು ಉಳಿದವು ಹದಿನೈದು ಅಥವಾ ಹದಿನಾಲ್ಕು ಪ್ರಶ್ನೆಗಳು ಮಾತ್ರ. ಇವುಗಳಿಗೆ ಗೀತೆಯ ಸಮಾಧಾನವನ್ನು ಸಂಕ್ಷೇಪವಾಗಿ ಸಂಗ್ರಹಿಸಿ ತರುವಾಯ ಅದರ ಅಂತರ್ವಾಣಿ ಎಂದರೆ ಗೀತೆಯ ಮುಖ್ಯ ತಿರುಳೇನೆಂಬುದನ್ನು ವಿವೇಚಿಸುವ.

## ಅರ್ಜುನನ ಸಂದೇಹಗಳಿಗೆ ಭಗವಂತನ ಸಮಾಧಾನಗಳು.

ಮೊದಲನೆಯ ಅಧ್ಯಾಯದಲ್ಲಿ ಅರ್ಜುನನು ಎದುರಾಳಿಗಳನ್ನು ಕಂಡು ಅವರ ಪರಿಚಯಮಾಡಿಕೊಡಲು ಪ್ರಾರ್ಥಿಸಿದನು.

(೧–೨೨,೨೩)

ಶ್ರೀ ಕೃಷ್ಣನು ಪಾರ್ಥನ ಪ್ರಾರ್ಥನೆಯಂತೆ ಎರಡು ಸೇನೆಗಳ ಮಧ್ಯದಲ್ಲಿ ಭೀಷ್ಮದ್ರೋಣರ ಸಮ್ಮುಖದಲ್ಲಿ ರಥವನ್ನು ನಿಲ್ಲಿಸಿದನು. ಎದುರು ಪಕ್ಷದಲ್ಲಿ ಇರುವವರಲ್ಲಿ ಕೆಲವರು ಗುರುಗಳು, ಹಿರಿಯರು, ವೃದ್ಧರು, ಪಿತಾಮಹ, ಆಚಾರ್ಯರು; ಸೋದರಮಾವ, ಸಹೋದರರ ಪುತ್ರ, ಪೌತ್ರ, ಹಾಗೂ ಮಾವ ಮುಂತಾದ ಬಂಧುಗಳು; ಇಷ್ಟಮಿತ್ರರು ಮೊದಲಾದವರು. ಭಗವಂತನು ಅವರನ್ನೆಲ್ಲ ಪರಿಚಯ ಮಾಡಿಕೊಟ್ಟನು.

ಅರ್ಜುನನ ಹೃದಯವು ತಳಮಳಗೊಳ್ಳಲಾರಂಭಿಸಿತು. ಅವನು ದೈನ್ಯದಿಂದ ಹೀಗೆಂದನು. (೧–೨೬,೨೭)

"ಕೃಷ್ಣ, ಯುದ್ಧಕ್ಕಾಗಿ ಸಿದ್ಧರಾಗಿರುವ ಸ್ವಜನರನ್ನು ನೋಡಿ, ಅವರನ್ನು ವಧಿಸುವ ಬಗ್ಗೆ ಏಕೋ ಮನಸ್ಸು ನೊಂದಿದೆ! ಅಂಗಗಳು ಶಿಥಿಲವಾಗುತ್ತಿವೆ. ಬಾಯೊಣಗುತ್ತಿದೆ. ಶರೀರ ನಡುಗುತ್ತಿದೆ. ಗಾಂಡೀವವು ಕೈಯಿಂದ ಜಾರುತ್ತಿದೆ. ವಿಪರೀತ ನಿಮಿತ್ತಗಳಾಗುತ್ತಿವೆ. ಈ ಸಮರದಲ್ಲಿ ಸ್ವಜನರನ್ನು ಕೊಂದರೆ ಬರುವ ಲಾಭವೇನು? ನನಗೆ ಇಂಥ ವಿಜಯಬೇಡ; ರಾಜ್ಯಬೇಡ; ಸುಖವೂ ಬೇಡ! ಇವುಗಳಿಂದ ಆಗಬೇಕಾದದ್ದೇನು? ಮೂರುಲೋಕಗಳು ಲಭಿಸಿದರೂ ನಾನಿವರನ್ನು ಕೊಲ್ಲಲಾರೆ ಎಂದಮೇಲೆ ಒಂದು ನೆಲಕ್ಕಾಗಿ ಇಂಥ ಕೆಲಸ ಮಾಡಲೆ? ಮೇಲಾಗಿ ಇಂಥ ಪಾಪಿಗಳನ್ನು ಕೊಲ್ಲುವುದರಿಂದ ಪಾಪವೇ ಬರುವುದಲ್ಲವೆ?

ಏಕೆಂದರೆ ಬಂಧುವಧೆಯಿಂದ ಕುಲವು ನಾಶವಾಗುತ್ತದೆ. ಕುಲಕ್ಷಯದಿಂದ ಪಾಪಬರುತ್ತದೆ. ಕುಲವು ಕ್ಷಯವಾದರೆ ಕುಲಧರ್ಮಗಳೂ ನಾಶವಾಗುತ್ತವೆ. ಧರ್ಮನಾಶದಿಂದ ಅಧರ್ಮವು ಹೆಚ್ಚಿ ಇಡೀಸಮಾಜವೇ ಪಾಪಪಂಕದಲ್ಲಿ ಮುಳುಗಿಬಿಡುತ್ತದೆ. ಅಧರ್ಮದಿಂದ ಕುಲಸ್ತ್ರೀಯರು ಕೆಡುತ್ತಾರೆ. ಅವರು ಕೆಟ್ಟರೆ ವರ್ಣಸಾಂಕರ್ಯ! ವರ್ಣಸಾಂಕರ್ಯದಿಂದ ನರಕಪ್ರಾಪ್ತಿ. ಆಗ ಪಿಂಡೋದಕ ಕ್ರಿಯೆಗಳಿಲ್ಲದೆ ಪಿತೃಗಳಿಗೆ ದುರ್ಗತಿ ಪ್ರಾಪ್ತವಾಗುತ್ತದೆ!

ಅಯ್ಯೋ! ಎಂಥ ಪಾಪಕರ್ಮವೆಸಗಲು ನಾವು ಉದ್ಯುಕ್ತರಾಗಿದ್ದೇವೆ! ನಾನು ಹೀಗೆ ನಿಶ್ಯಸ್ತ್ರನಾಗಿ, ಪ್ರತೀಕಾರವೆಸಗದಿದ್ದರೆ ಶತ್ರುಗಳು ನನ್ನನ್ನು ಕೊಲ್ಲಬಹುದು! ಒಂದು ವೇಳೆ ಕೌರವರು ಕೊಂದರೂ ನನಗೆ ದುಃಖವಿಲ್ಲ. ಅದು ಒಂದು ರೀತಿ ಒಳ್ಳೆಯದೆ. ಆದರೆ ಮಾತ್ರ ನಾನಿವರನ್ನು ಕೊಲ್ಲಲಾರೆ!" ಎಂದನು. (೧,೩೮-೪೬)

ಇದಕ್ಕೆ ಉತ್ತರವಾಗಿ ಭಗವಂತನು :—

"ಅರ್ಜುನ, ಈ ಅಜ್ಞಾನವು ನಿನಗೆ ಹೇಗೆ ಬಂತು? ಉತ್ತಮರಿಗೆ ಅನುಚಿತವೂ, ಪತನಕ್ಕೆ ಕಾರಣವೂ ಆದ ಅಪಯಶಸ್ಸನ್ನುಂಟುಮಾಡುವ ಈ ಹೇಡಿತನ ನಿನಗೆ ಎಲ್ಲಿ ಕವಿಯಿತು? ಹೃದಯ ದೌರ್ಬಲ್ಯಕ್ಕೆ ಕಾರಣವಾದ ಈ ಹೇಡಿತನವನ್ನು ಬಿಡು. ನಿನ್ನಂತಹ ವೀರನಿಗೆ ಇದು ತಕ್ಕದ್ದಲ್ಲ. ಆದ್ದರಿಂದ ಯುದ್ಧಕ್ಕೆ ಸಿದ್ಧನಾಗು. ಎದ್ದೇಳು!" ಎಂದನು. (೨,೨-೩)

"ಮಧುಸೂದನ, ಪೂಜಾರ್ಹರಾದ ಭೀಷ್ಮದ್ರೋಣರನ್ನು ರಣಭೂಮಿಯಲ್ಲಿ ಹೊಡೆಯುವುದು ಹೇಗೆ? ಇವರನ್ನು ಕೊಂದು ಮೃಷ್ಟಾನ್ನವುಣ್ಣುವುದಕ್ಕಿಂತ ಭಿಕ್ಷಾನ್ನದಿಂದ ಜೀವಿಸುವುದು ಲೇಸಲ್ಲವೆ? ಅವರ ಪವಿತ್ರ ರಕ್ತದಿಂದ ನೆನೆದ ಅರ್ಥಕಾಮಗಳನ್ನು ಭೋಗಿಸಬಹುದೆ? ಇದರಮೇಲೆ ನಮ್ಮ ದೊಡ್ಡಪ್ಪನ ಮಕ್ಕಳಾದ ಕೌರವರನ್ನು ಕೊಲ್ಲುವುದೇ? ಕರ್ತವ್ಯ ಮೂಢನಾಗಿದ್ದೇನೆ. ನನಗೆ ಹಿತಕರವಾದ ದಾರಿಯಾವುದು? ಅನನ್ಯ ಶರಣನಾದ

ನನಗೆ ನಿನ್ನಹೊರತು ದಿಕ್ಕಾರು? ನನ್ನ ಕರ್ತವ್ಯವೇನು? ದಾರಿ ತೋರಿಸು.” (೨,೪-೮) ಎಂದು ಬೇಡಿದ ಪಾರ್ಥನಿಗೆ ಭಗವಂತನು ಸಾಂಖ್ಯ (ಬುದ್ಧಿ) ಸರಣಿಯ ಸಮಾಧಾನವನ್ನು ಹೇಳತೊಡಗಿದನು.



## ಕರ್ಮಯೋಗ

ಸಾಂಖ್ಯಸರಣಿಯ ಸಮಾಧಾನ:— "ಅರ್ಜುನ, ನೀನು ಪಾಂಡಿತ್ಯದ ಮಾತುಗಳನ್ನಾಡುತ್ತಿರುವೆ. ಆದರೆ ಪಂಡಿತರು ಹೀಗೆ ಸಾಯುವವರಿಗಾಗಲಿ, ಬದುಕಿರುವವರಿಗಾಗಲಿ ದುಃಖಿಸುವುದಿಲ್ಲ. (೨–೧೧) ಅನುಚಿತವಾದ ವಿಷಯಕ್ಕಾಗಿ ಶೋಕ ಮಾಡುತ್ತಿರುವೆ. ವಿಚಾರಮಾಡಿ ನೋಡಿದರೆ ನಾನು, ನೀನು ಮತ್ತು ಈ ರಾಜರು ಹಿಂದೆ ಇದ್ದೆವೆ? ಮುಂದೆ ಇರುವೆವೆ? (೨–೧೨) ದೇಹದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯಗಳು ಒಂದರ ಹಿಂದೆ ಒಂದು ಬರುವಂತೆ ಜೀವನಿಗೂ ಬೇರೆಬೇರೆ ಶರೀರಗಳು ಲಭಿಸುತ್ತವೆ. (೨–೧೩)

ಸುಖದುಃಖಗಳಲ್ಲಿ ಸಮತೆಯನ್ನು ಗಳಿಸಿದವನನ್ನು ಈ ವಿಷಯಗಳು ಬಾಧಿಸಲಾರವು. (೨–೩೮) ಇವಕ್ಕಾಗಿ ಶೋಕಿಸುವವನು ಅಮೃತತತ್ವಕ್ಕೆ ಅನರ್ಹನು. ಈ ಜಗತ್ತನ್ನು ವ್ಯಾಪಿಸಿರುವ ವಸ್ತು ಎಂದೂ ನಾಶವಾಗುವುದಿಲ್ಲ. ಯಾರೂ ಅದನ್ನು ನಾಶ ಮಾಡಲಾರರು.

ಆತ್ಮ ಅವಿನಾಶಿ. ಅದಕ್ಕೆ ಹುಟ್ಟು ಸಾವುಗಳಿಲ್ಲ. ಅದು ನಿತ್ಯ. ಅಂದ ಮೇಲೆ ಕೊಲ್ಲುವುದು ಯಾರನ್ನು? ಅದನ್ನು ಕೊಲ್ಲುವುದಾದರೂ ಹೇಗೆ? ಹಳೆಯ ಬಟ್ಟೆಗಳನ್ನು ಕಳಚಿ ಹೊಸವನ್ನು ಜನ ಧರಿಸುವಂತೆ ದೇಹಿಯು ಜೀರ್ಣವಾದ ದೇಹಗಳನ್ನು

ತ್ಯಜಿಸಿ ಬೇರೆ ಶರೀರ ಧರಿಸುತ್ತಾನೆ. (೨–೨೨) ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು. ಬೆಂಕಿ ಸುಡಲಾರದು. ನೀರು ನೆನೆಸ ಲಾರದು. ಗಾಳಿ ಒಣಗಿಸಲಾರದು. (೨–೨೩) ಆತ್ಮವು ಇಂದ್ರಿಯ ಮನಸ್ಸುಗಳಿಗೆ ಅಗಮ್ಯವಾದುದು. (೨–೨೫) ಹುಟ್ಟು ಸಾವುಗಳು ಅನಿವಾರ್ಯ. ಅದಕ್ಕಾಗಿ ದುಃಖಿಸುವುದೇಕೆ? (೨–೨೭) ಒಟ್ಟಿನಲ್ಲಿ ಆತ್ಮ ನಿತ್ಯ. ಅದನ್ನು ಕೊಲ್ಲಲು ಸಾಧ್ಯವಿಲ್ಲ. ಇದಕ್ಕೆ ಶೋಕಿಸಬೇಡ. (೨–೩೦)

ಆದರೆ ಮಾನವನಿಗೆ ಕರ್ತವ್ಯವೇ ಮುಖ್ಯವಾದುದು. ಅದೇ "ಸ್ವಧರ್ಮ". ಅದನ್ನು ತಿಳಿದೂ ಏಕೆ ಕಳವಳಪಡುವೆ? ನೀನು ಕ್ಷತ್ರಿಯ. ಕ್ಷತ್ರಿಯನಿಗೆ ಯುದ್ಧಕ್ಕಿಂತ ಮುಖ್ಯ ಧರ್ಮ ವಾವುದೂ ಇಲ್ಲ. (೨–೩೧) ಈಗ ನೀನು ಕರ್ತವ್ಯ ವಿಮುಖ ನಾದರೆ ಸ್ವಧರ್ಮವನ್ನು ಕಳೆದುಕೊಂಡು ಪಾಪಿಯಾಗುವೆ. (೨–೩೩) ಗೌರವಸ್ಥನಿಗೆ ಅಪಕೀರ್ತಿಯು ಸಾವಿಗಿಂತ ದೊಡ್ಡದು. (೨–೩೪)

ನಿನ್ನ ಹೇಡಿತನವನ್ನು ನೋಡಿ ಶತ್ರುಗಳು ಹೀಯಾಳಿ ಸುವರು. (೨–೩೬) ನೀನು ಸಮರದಲ್ಲಿ ಮಡಿದರೆ ವೀರಸ್ವರ್ಗ. ಗೆದ್ದರೆ ಪೃಥ್ವಿಯನ್ನು ಭೋಗಿಸುವೆ! ಧೀರನಾದವನು ಸುಖ, ದುಃಖ, ಲಾಭ, ನಷ್ಟ, ಜಯಾಪಜಯಗಳನ್ನು ಸಮವಾಗಿ ಭಾವಿಸುವನು. (೨–೩೮)

ತರ್ಕ ಎಂದರೆ ಸಾಂಖ್ಯ (ಬುದ್ಧಿ) ಸರಣಿಯನ್ನು ಅನುಸರಿಸಿ ನಿನಗೆ ಇದುವರೆಗೆ ಸಮಾಧಾನ ಹೇಳಿದೆ. ಇನ್ನುಮುಂದೆ ಯೋಗ

(ನಿಷ್ಕಾಮಕರ್ಮ) ಸರಣಿಯನ್ನು ಬೋಧಿಸುವೆನು.

ಯೋಗ ಸರಣಿಯ ಸಮಾಧಾನ :—

ನಿಷ್ಕಾಮಕರ್ಮಕ್ಕೆ ಎಂದಿಗೂ ವಿಘ್ನಗಳು ಬರುವುದಿಲ್ಲ. ಅದು ಸಿದ್ಧಿಸದಿದ್ದರೂ ದೋಷವಿಲ್ಲ. ನಿಷ್ಕಾಮ ಬುದ್ಧಿಯಿಂದ ನಾವು ಕರ್ಮವೆಸಗಿದರೆ ಅದು ನಮ್ಮನ್ನು ಘೋರ ಸಂಸಾರದಿಂದ ಬಿಡುಗಡೆ ಮಾಡುತ್ತದೆ. (೨-೪೦) ನಿಷ್ಕಾಮ ಕರ್ಮ ಮಾರ್ಗದಲ್ಲಿ ಈಶ್ವರಾರ್ಪಣವೇ ಬಹು ಮುಖ್ಯವಾದ ಭಾಗ. ಸಕಾಮಕರ್ಮಕ್ಕೆ ಅನೇಕ ಶಾಖೋಪಶಾಖೆಗಳಿವೆ. (೨-೪೧) ಅಜ್ಞಾನಿಗಳು ಸಕಾಮಕರ್ಮದಲ್ಲಿ ತೊಡಗುತ್ತಾರೆ. ಅವರು ಸ್ವರ್ಗಾದಿಫಲಗಳ ಹೊರತು ಮೋಕ್ಷವೆಂಬುದು ಇಲ್ಲವೆಂದು ಭಾವಿಸಿ ನಶ್ವರವಾದ ಭೋಗೈಶ್ವರ್ಯಗಳಲ್ಲಿ ಲೋಲರಾಗುತ್ತಾರೆ. ಈಶ್ವರಾನುಗ್ರಹದ ಅರಿವೇ ಅವರಿಗಿರುವುದಿಲ್ಲ. ಆತ್ಮತತ್ತ್ವದಲ್ಲಿ ಭರವಸೆಯೂ ಇರುವುದಿಲ್ಲ.

ಕರ್ಮಪ್ರಧಾನವಾದ ವೇದಭಾಗವು ಸಕಾಮರಿಗೆ ಅನುಗುಣವಾಗಿದೆ. ನೀನುಮಾತ್ರ ಅದರಲ್ಲಿ ಆಸಕ್ತನಾಗಬೇಡ. ನಿಷ್ಕಾಮಕರ್ಮದಲ್ಲಿ ತೊಡಗು. ಸುಖದುಃಖಾದಿ ದ್ವಂದ್ವಗಳಲ್ಲಿ ಸಮತೆಯನ್ನು ಸಾಧಿಸು. ಸಾತ್ವಿಕನಾಗು. ಈಶ್ವರಾರ್ಪಿತ ಬುದ್ಧಿಯಿಂದ ಕರ್ತವ್ಯಾಭಿಮುಖನಾಗು. (೨,೪೨-೪೪)

ಕೆರೆಭಾವಿಗಳಿಂದಾಗುವ ಪ್ರಯೋಜನಗಳು ಹೇಗೆ ಮಡುವಿನಿಂದ ಪೂರೈಸುವುವೊ ಅದರಂತೆ ವೇದೋಕ್ತವಾದ ಕರ್ಮ

ಗಳು ಆತ್ಮ ತತ್ತ್ವವನ್ನು ಬಲ್ಲ ಜ್ಞಾನಿಯ ಬ್ರಹ್ಮಾನಂದದಲ್ಲಿಯೇ ಗತಾರ್ಥವಾಗುತ್ತವೆ. (೨,೪೬) ನಿನಗೆ ಕರ್ಮಮಾಡುವುದಕ್ಕೆ ಮಾತ್ರ ಅಧಿಕಾರವೆ ಹೊರತು ಅದರ ಫಲ ಜಿಜ್ಞಾಸೆಯಲ್ಲಲ್ಲ. ಆದ್ದರಿಂದ ಸುಮ್ಮನೆ ನಿಷ್ಕಾಮ ಕರ್ಮವನ್ನಾಚರಿಸು. (೨,೪೭)

ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟು ಪರಮೇಶ್ವರನಲ್ಲಿ ಮನಸ್ಸಿಟ್ಟು ಅಭಿಮಾನ ತೊರೆದು ಸಫಲತೆ ನಿಷ್ಫಲತೆಗಳನ್ನು ಸಮವೆಂದು ಭಾವಿಸಿ ಕರ್ಮಮಾಡು. ಸಮತೆಯೇ ಯೋಗ. (೨,೪೮) ಹೀಗೆ ಸಮತೆ ಗಳಿಸಿದವನಿಗೆ ಪಾಪಪುಣ್ಯಗಳ ಲೇಪ ವಿಲ್ಲ. ಕರ್ಮದಲ್ಲಿ ಕಾಮನೆಯನ್ನು ಬಿಡುವುದೆ "ಕರ್ಮ ಕೌಶಲ"ವೆನಿಸುವುದು. ಅಂದರೆ ಸಮತೆಯೇ ಕಾರ್ಯಕುಶಲತೆ. (೨,೫೦) ನಿಷ್ಕಾಮಕರ್ಮಿಗಳು ಜನ್ಮಬಂಧವನ್ನು ಕಳಚಿ ಕೊಂಡು ವಿಮುಕ್ತರಾಗುತ್ತಾರೆ. (೨,೫೧) ಅನೇಕಪ್ರಕಾರವಾದ ಸಿದ್ಧಾಂತಗಳನ್ನು ಕೇಳಿ ಸಂದೇಹ ಹೊಂದಿದ ನಿನ್ನ ಮನಸ್ಸು ಈ ಬಗೆಯ ಸ್ಥೈರ್ಯವನ್ನು ಗಳಿಸಿದಾಗ ಸಮತೆ ನಿನಗೆ ಸಿದ್ಧಿಸು ವುದು. ಆಗ ಸ್ಥಿತಪ್ರಜ್ಞನೆನಿಸುವೆ." (೨,೫೨-೫೩)

## ಸ್ಥಿತಪ್ರಜ್ಞನ ಸ್ವರೂಪ.

೪ "ಸ್ಥಿತಪ್ರಜ್ಞನೆಂದರೆ ಯಾರು? ಅವನ ಸ್ವರೂಪ ವೇನು? (೨,೫೪)

"ಪಾರ್ಥ, ಮಾನವನು ಹೊರಗಿನ ಆಸೆಗಳನ್ನು ತೊರೆದು ಸುಖವನ್ನು ಆತ್ಮನಲ್ಲಿಯೇ ಹುಡುಕಬೇಕು. ತನ್ನಲ್ಲಿ ತಾನು

ಸಂತುಷ್ಟನಾಗಿರುವುದೇ ಸ್ಥಿತಪ್ರಜ್ಞತೆ. (೨,೫೫) ಸುಖದಲ್ಲಿ ಹಿಗ್ಗದೆ ದುಃಖದಲ್ಲಿ ತಗ್ಗದೆ ರಾಗ, ಭಯ, ಕ್ರೋಧಗಳನ್ನು ತ್ಯಜಿಸಿದವನು ಸ್ಥಿತಪ್ರಜ್ಞ. ತನಗೆ ಲಭಿಸುವ ವಿಷಯಗಳಲ್ಲಿ ಅತ್ಯಾಸಕ್ತನಾಗದೆ ಪ್ರಾರಬ್ಧಾನುಗುಣವಾಗಿ ಒದಗಿದ ಕಷ್ಟದಲ್ಲಿ ಎದೆಗುಂದದಿದ್ದರೆ ಆಗ ಬುದ್ಧಿಯು ಸ್ಥಿರಪಟ್ಟಿತೆಂದು ಅರಿಯ ಬೇಕು. (೨,೫೭) ಆಮೆಯು ತನ್ನ ಅವಯವಗಳನ್ನು ಒಳಗೆಳೆದು ಕೊಂಡು ಇರುವಂತೆ ಸ್ಥಿತಪ್ರಜ್ಞನು ತನ್ನ ಇಂದ್ರಿಯಗಳನ್ನು ನಿಗ್ರಹಿಸಿಕೊಂಡು ಶಾಂತನಾಗಿರುತ್ತಾನೆ. (೨,೫೮) ಉಪ ವಾಸಾದಿ ನೇಮಗಳಿಂದ ವಿಷಯವಾಸನೆ ಕೊಂಚ ತಗ್ಗುವುದು. ಆದರೆ ಅದು ಭಗವತ್ಪ್ರಸಾದವಾದಮೇಲೆಯೇ ಸಂಪೂರ್ಣವಾಗಿ ನಶಿಸುವುದು. (೨,೫೯)

## ವಿಷಯಾಕರ್ಷಣೆಯ ಪ್ರಾಬಲ್ಯ.

ಇಂದ್ರಿಯದಮನ ಮಾಡಬೇಕೆಂದು ಪ್ರಯತ್ನಿಸುವ ವಿವೇಕಿಗೂ ಕೂಡ ಶ್ರೋತ್ರಾದಿ ಇಂದ್ರಿಯವಿಷಯಗಳು ಬಲಾತ್ಕಾರದಿಂದ ವಿಕಾರವನ್ನುಂಟುಮಾಡುವುವು. (೨,೬೦) "ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ" (ಮಹಾ ಭಾರತ. ಪ. ೧) ಎಂಬ ಮಾತು ಇಲ್ಲಿ ಸಮನ್ವಯವಾಗುತ್ತದೆ. ವಿಷಯಾಭಿಮುಖವಾದ ಆಯಾ ಇಂದ್ರಿಯಗಳನ್ನು ಹಿಂದಕ್ಕೆ ಎಳೆದುಕೊಂಡು ತನ್ನಲ್ಲಿ ತನ್ಮಯನಾಗಬೇಕು. ಆಗಲೇ ಬುದ್ಧಿಯು ಸ್ಥಿರಪಡುವುದು. (೨,೬೧)

ವಿಷಯಗಳನ್ನು ಚಿಂತಿಸುತ್ತಿದ್ದರೆ ಅವುಗಳಲ್ಲಿ ಆಸಕ್ತಿ ಯುದಿಸುತ್ತದೆ. ಆಸಕ್ತಿಯಿಂದ ಆಸೆ; ಆಸೆಯಿಂದ ಕ್ರೋಧ;

ಕ್ರೋಧದಿಂದ ಮೋಹ (ಅವಿವೇಕ); ಮೋಹದಿಂದ ಮರವೆ; ಮರವೆಯಿಂದ ಬುದ್ಧಿನಾಶ; ಅದರಿಂದ ಸರ್ವನಾಶ. (೨,೬೨–೬೩) ಹೀಗೆ ವಿಷಯಾಸಕ್ತಿಯು ಎಲ್ಲ ಅನರ್ಥಕ್ಕೂ ಮೂಲ. ಜಿತೇಂದ್ರಿಯನಿಗೆ ವಿಷಯ ವಿರತಿ ಹುಟ್ಟುತ್ತದೆ. ಅನಾಸಕ್ತನು ಪ್ರಾರಬ್ಧದಿಂದ ಒದಗಿದ ವಿಷಯಗಳನ್ನು ಅನುಭವಿಸುತ್ತಿದ್ದರೂ ಪ್ರಸನ್ನನಾಗಿಯೇ ಇರುವನು. (೨,೬೪)

## ಪ್ರಸನ್ನತೆಯ ಹಿರಿಮೆ.

ಮನಸ್ಸಿನ ಪ್ರಸನ್ನತೆಯಿಂದ ಎಲ್ಲ ದುಃಖಗಳೂ ಪರಿಹಾರವಾಗುತ್ತವೆ. ಸಮತಾಬುದ್ಧಿಯಿಲ್ಲದ ಮೇಲೆ ಆತ್ಮಜ್ಞಾನ ವುದಿಸುವುದಿಲ್ಲ. ಆತ್ಮಚಿಂತನವಿಲ್ಲದ ಮೇಲೆ ಶಾಂತಿಯಿಲ್ಲ. ಅಶಾಂತನಿಗೆ ಸುಖವೆಲ್ಲಿಯದು? (೨,೬೫–೬೬)

ಸಮುದ್ರದಲ್ಲಿ ಬಿರುಗಾಳಿಗೆ ಸಿಕ್ಕಿದ ಹಡಗು ಸಿಕ್ಕಿದ ಕಡೆ ಕೊಚ್ಚಿಹೋಗುವಂತೆ ಇಂದ್ರಿಯವಶನಾದವನ ಮನಸ್ಸು ವಿಷಯಗಳ ಕಡೆ ಓಡುತ್ತದೆ. ಆದುದರಿಂದ ಎಲೈ ಮಹಾಬಾಹುವೆ, ವಿಷಯಗಳ ಕಡೆ ಹರಿಯುತ್ತಿರುವ ಇಂದ್ರಿಯಗಳನ್ನು ನಿಗ್ರಹಿಸು. (೨,೬೭–೬೮) ಸಂಯಮಿಯು ಹಗಲಿನಲ್ಲಿ ನಿದ್ರಿಸಿ ಇರುಳಿನಲ್ಲಿ ಆತ್ಮಾನುಸಂಧಾನದಲ್ಲಿ ತೊಡಗಿರುತ್ತಾನೆ. (೨,೬೯) ಗಂಗಾದಿ ನದಿಗಳು ಸಮುದ್ರವನ್ನುಸೇರಿ ಪ್ರಶಾಂತವಾಗುವಂತೆ ಎಲ್ಲ ಆಸೆಗಳನ್ನು ತ್ಯಜಿಸಿ, ಅಹಂಕಾರ ಮಮಕಾರಗಳನ್ನು ತೊರೆದು ನಡೆಯುವವನಿಗೆ ಶಾಂತಿ ಲಭಿಸುತ್ತದೆ. (೨,೭೦–೭೧) ಇದೇ

ಬ್ರಾಹ್ಮೀಸ್ಥಿತಿ. ಇದು ಸಿದ್ಧಿಸಿದರೆ ಮತ್ತೆ ಮೋಹವು ಆವರಿಸುವುದಿಲ್ಲ. ಮರಣಕಾಲದಲ್ಲಾದರೂ ಈ ಸ್ಥಿತಿ ಲಭಿಸಿದಲ್ಲಿ ಕೈವಲ್ಯವು ಸಿದ್ಧಿಸುವುದು." (೨–೭೨)

೫ "ಜನಾರ್ದನ, ಕರ್ಮಕ್ಕಿಂತ ಬುದ್ಧಿಯು ಶ್ರೇಷ್ಠವಾದ ಪಕ್ಷದಲ್ಲಿ ನನ್ನನ್ನು ಈ ಘೋರ ಕರ್ಮಕ್ಕೆ ಪ್ರೇರಿಸುತ್ತಿರುವೆಯೇಕೆ? ನಿನ್ನ ಮಿಶ್ರವಾದ ಮಾತುಗಳಿಂದ ನನ್ನ ಸಂದೇಹ ಹೆಚ್ಚುತ್ತಿದೆ. ಹಿಂದೆ ಹೇಳಿದ ಸಾಂಖ್ಯ (ಬುದ್ಧಿ)ಯೋಗ ಮತ್ತು ಈಗ ಹೇಳಿದ ಕರ್ಮಯೋಗಗಳಲ್ಲಿ ನನಗೆ ಶ್ರೇಯಸ್ಕರವಾದುದು ಯಾವುದು ಹೇಳು?" (೩,೧–೨)

"ಅರ್ಜುನ, ನಿನಗೆ ಬುದ್ಧಿ (ಜ್ಞಾನ) ಮತ್ತು ಕರ್ಮ ಎಂಬ ಎರಡು ಯೋಗ ಮಾರ್ಗಗಳನ್ನು ಹೇಳಿದೆ. ಅವುಗಳಲ್ಲಿ ಬುದ್ಧಿಯೋಗವು ಶುದ್ಧಾಂತಃಕರಣರಾದ ಜ್ಞಾನಿಗಳಿಗೂ ಕರ್ಮಯೋಗವು ಅಶುದ್ಧಾಂತಃಕರಣವುಳ್ಳವರಿಗೂ ಉಚಿತವಾಗಿದೆ. ಅಂದಮೇಲೆ ನಾನು ನಿನಗೆ ಮಿಶ್ರವಾದ ಮಾತುಗಳನ್ನೇನೂ ಹೇಳಲಿಲ್ಲ. (೩–೩)

ನಿಷ್ಕಾಮ ಕರ್ಮದಿಂದ ಮೊದಲು ಅಂತಃಕರಣಗಳನ್ನು ಪರಿಶುದ್ಧಿಗೊಳಿಸಬೇಕು. ಅಂತಃಕರಣ ಶುದ್ಧವಾಗದೆ ಕೇವಲ ಸಂನ್ಯಾಸ (ಬಾಹ್ಯತ್ಯಾಗ)ದಿಂದ ನೈಷ್ಕರ್ಮ್ಯ (ಜ್ಞಾನನಿಷ್ಠೆ) ಸಿದ್ಧಿಸುವುದಿಲ್ಲ. (೩–೪) ಕರ್ಮಮಾಡದ ಮನುಜರಿಲ್ಲ. ಮನುಷ್ಯನು ಪ್ರತಿಕ್ಷಣದಲ್ಲಿಯೂ ದೈಹಿಕ ಇಲ್ಲವೆ ಮಾನಸಿಕ

ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಪ್ರಕೃತಿಸಿದ್ಧವಾದ ಗುಣಗಳಿಗೆ ಪರವಶನಾಗಿ ಮಾನವನು ಕರ್ಮಮಾಡುತ್ತಿರುತ್ತಾನೆ. (೩–೫) ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಮಾನಸಿಕವಾಗಿ ವಿಷಯಗಳನ್ನು ನೆನೆಯುವವನು ಮಿಥ್ಯಾಚಾರಿ. ಮನಃಪೂರ್ವಕವಾಗಿ ಇಂದ್ರಿಯಗಳನ್ನು ನಿಗ್ರಹಿಸಿ ಸಂಗರಹಿತನಾದವನು ಶ್ರೇಷ್ಠನು. (೩,೬–೭) ಯಾವಾಗಲೂ ಕರ್ಮಮಾಡುತ್ತಿರಬೇಕು. ಸುಮ್ಮನಿರುವುದಕ್ಕಿಂತ ಕರ್ಮಗೈಯುವುದು ಲೇಸು. (೩–೮)

## ಯಜ್ಞಕ್ಕಾಗಿ ಕರ್ಮ

ಈಶ್ವರ ಪ್ರೀತ್ಯರ್ಥವಾಗಿ ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡುವುದಕ್ಕೆ ಯಜ್ಞವೆಂದು ಹೆಸರು. ಪರೋಪಕಾರರೂಪವಾದ ಕರ್ಮಗಳೆಲ್ಲವೂ ಯಜ್ಞವೆ. ಇಂಥ ಕರ್ಮಗಳು ಬಂಧಕವಲ್ಲ. ಆದರಿಂದಲೇ ಮಾನವನಿಗೆ ಶ್ರೇಯಸ್ಸು. (೩-೯) ದೇವತೆಗಳು ಸಂತುಷ್ಟರಾಗುವುದು ಯಜ್ಞದಿಂದ. ಪರೋಪಕಾರವೇ ಈಶ್ವರನಿಗೆ ಪ್ರಿಯಕರ. ಇಂಥ ಕರ್ಮದಿಂದ ಪಾಪ ಘಟಿಸುವುದಿಲ್ಲ. ಕೇವಲ ತನಗಾಗಿ ಮಾಡುವ ಕರ್ಮಗಳಿಂದ ಪಾಪವುಂಟಾಗುತ್ತದೆ. (೩,೧೧–೧೩)

ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಮಳೆಯಿಂದ ಅನ್ನ ಉತ್ಪನ್ನವಾಗುತ್ತದೆ. ಮಳೆಯು ಯಜ್ಞದಿಂದ; ಯಜ್ಞವು ಕರ್ಮದಿಂದಾಗುತ್ತದೆ. ಇದು ಸುತ್ತುತ್ತಿರುವ ಒಂದು ಚಕ್ರ. ಇದನ್ನು ಒಪ್ಪಿ ನಡೆಯಬೇಕು. ಇಲ್ಲದಿದ್ದರೆ ವಿಷಯಗಳ ಸುಳಿಗೆ ಸಿಕ್ಕಬೇಕಾಗುತ್ತದೆ. (೩,೧೪–೧೬)

## ಆತ್ಮರತಿಗೆ ಕರ್ಮವು ಬಂಧಕವಲ್ಲ

ಆತ್ಮನಲ್ಲಿಯೇ ಪ್ರೀತಿಯುಳ್ಳವನಿಗೆ ಆತ್ಮರತಿ ಎಂದು ಹೆಸರು. ಆತ್ಮರತಿಗೆ ಕರ್ಮವು ಬಂಧಕವಲ್ಲ. ಆತ್ಮದಲ್ಲಿ ರತನಾದವನಿಗೆ ಅಲ್ಲಿಯೇ ಆನಂದ ಲಭಿಸುತ್ತದೆ. ಅವನಿಗೆ ಯಾವ ಕರ್ಮದಲ್ಲಿಯೂ ಸ್ವಾರ್ಥವಿರುವುದಿಲ್ಲ. ಅನಾಸಕ್ತಿಯಿಂದ ಕರ್ಮ ಮಾಡಬೇಕು. ಅನಾಸಕ್ತನಿಗೆ ಮೋಕ್ಷ ಲಭಿಸುವುದು.(೩,೧೭-೧೯)

ಆತ್ಮರತಿಯೂ ಲೋಕಸಂಗ್ರಹಕ್ಕಾಗಿ ಕರ್ಮಮಾಡಬೇಕು. ಜನಕ ಮೊದಲಾದವರು ಸಹ ನಿಷ್ಕಾಮಕರ್ಮದಿಂದಲೇ ಸಿದ್ಧಿ ಪಡೆದರು. ಲೋಕಸಂಗ್ರಹಕ್ಕಾಗಿ ನೀನೂ ಕರ್ಮಮಾಡು. ಉತ್ತಮರ ನಡೆನುಡಿಗಳನ್ನೇ ಸಾಮಾನ್ಯರು ಅನುಸರಿಸುತ್ತಾರೆ. ನನಗೆ ಮೂರುಲೋಕಗಳಲ್ಲಿಯೂ ಕೂಡ ಆಗಬೇಕಾದುದೇನೂ ಇಲ್ಲ. ಆದರೂ ನಾನು ಕರ್ಮವನ್ನು ತೊರೆದ ಪಕ್ಷದಲ್ಲಿ ಉಳಿದವರು ನನ್ನನ್ನೇ ಅನುಸರಿಸಿ ಕರ್ಮವನ್ನು ತ್ಯಜಿಸುತ್ತಾರೆ. ಆ ದೋಷ ನನಗೆ ತಟ್ಟುತ್ತದೆ. ಅನಾಸಕ್ತಿಯಿಂದ ಕರ್ಮ ಮಾಡುವುದೇ ಜ್ಞಾನಿಯ ಕರ್ತವ್ಯ. (೩,೨೦-೨೪)

## ಸಕಾಮಕರ್ಮ ಮಾಡುವವರ ಬಗ್ಗೆ ಜ್ಞಾನಿಯ ನಿಲುವು.

ಸಕಾಮಕರ್ಮದಲ್ಲಿ ಆಸಕ್ತನಾದ ಅಜ್ಞಾನಿಯ ಬಗ್ಗೆ ಜ್ಞಾನಿಯು ಎಚ್ಚರದಿಂದಿರಬೇಕು. ಅವನಿಗೆ ಬುದ್ಧಿ ವಿಕಲ್ಪವನ್ನುಂಟುಮಾಡಬಾರದು. ಅಂಥವರ ಜೊತೆಗೆ ಸೇರಿದ

ಜ್ಞಾನಿಯೂ ಅವರಂತೆ ಕರ್ಮವೆಸಗಿ ಅವರ ಶ್ರದ್ಧೆಯನ್ನು ಬೆಳೆಸ ಬೇಕು. ಕರ್ಮಗಳು ಪ್ರಕೃತಿಯ ಗುಣಗಳಿಂದ ನಡೆಯುತ್ತವೆ. ಮೂಢರು ಅಂಥ ಕರ್ಮಗಳು ನಮ್ಮಿಂದಲೇ ನಡೆಯುವುವೆಂದು ಹೇಳುತ್ತಾರೆ. ಜ್ಞಾನಿಯು ಹಾಗೆ ಭಾವಿಸುವುದಿಲ್ಲ. ನೀನು ಎಲ್ಲವನ್ನೂ ನನಗೆ ಒಪ್ಪಿಸಿ ಮಮಕಾರ ರಹಿತನಾಗಿ ಯುದ್ಧ ಮಾಡು. ಇದೇ ನನ್ನ ಮತ. ಮಾನವನಿಗೆ ಸುಲಭವೆನಿಸಿದ ಪರಧರ್ಮಕ್ಕಿಂತ ಸ್ವಧರ್ಮವೇ ಶ್ರೇಯಸ್ಕರ. ಸ್ವಧರ್ಮಸಾಧನೆ ಗಾಗಿ ಮರಣವಾದರೂ ಲೇಸು. ಆದರೆ ಪರಧರ್ಮವು ಮಾತ್ರ ಅನುಚಿತ." (೩,೨೬–೩೫)

೬ "ದೇವ, ಇಷ್ಟವಿಲ್ಲದಿದ್ದರೂ ಮಾನವನು ಯಾರ ಪ್ರೇರಣೆ ಯಿಂದ ಪಾಪವೆಸಗುತ್ತಾನೆ?" (೩,೩೬)

"ಅರ್ಜುನ, ಅಧರ್ಮಕ್ಕೆ ಮಾನವನನ್ನು ಪ್ರೇರಿಸುವುದು ಕಾಮ. ಅದು ಮುಂದುವರಿದರೆ ಕ್ರೋಧವೆನಿಸುವುದು. ಇದು ರಜೋಗುಣದಿಂದ ಹುಟ್ಟುತ್ತದೆ. ವಿಷಯೋಪಭೋಗದಿಂದ ಕಾಮವನ್ನು ತೃಪ್ತಿಪಡಿಸಲು ಸಾಧ್ಯವಿಲ್ಲ. ತುಪ್ಪ ಸುರಿದಷ್ಟೂ ಬೆಂಕಿ ಪ್ರಜ್ವಲಿಸುವಂತೆ ಕಾಮವು ಹೆಚ್ಚುತ್ತಲೇ ಇರುತ್ತದೆ. ಆದ್ದರಿಂದಲೇ ಕಾಮವನ್ನು "ಮಹಾಪಾಪಿ" ಎನ್ನುವುದು. ಬೆಂಕಿಗೆ ಹೊಗೆ, ಕನ್ನಡಿಗೆ ಧೂಳು, ಗರ್ಭಕ್ಕೆ ಜರಾಯು ಆವರಿ ಸಿರುವಂತೆ ಕಾಮವು ಜ್ಞಾನವನ್ನು ಕವಿಯುತ್ತದೆ. ಕಾಮಕ್ಕೆ ಇಂದ್ರಿಯಗಳು ಮನಸ್ಸು ಬುದ್ಧಿಗಳು ಆಶ್ರಯಸ್ಥಾನ. ಇವುಗಳ ಸಹಾಯದಿಂದ ಕಾಮವು ಜೀವನನ್ನು ಮೋಹಗೊಳಿಸುವುದು.

ಆದುದರಿಂದ ಮೊದಲು ಜಿತೇಂದ್ರಿಯನಾಗು. ಜಿತೇಂದ್ರಿಯನಾದರೆ ಕಾಮವನ್ನು ಗೆಲ್ಲುವೆ. (೩,೩೭–೪೧)

ಶರೀರಕ್ಕಿಂತ ಇಂದ್ರಿಯಗಳು, ಅವುಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವೆನಿಸುವುದು. ಬುದ್ಧಿಗಿಂತ ಶ್ರೇಷ್ಠವಾದುದು ಆತ್ಮ. ಆದುದರಿಂದ ಎಲೈ ಮಹಾಬಾಹುವೆ, ಅಂಥ ಆತ್ಮನನ್ನು ಅರಿತು ವಿವೇಕರೂಪವಾದ ಬುದ್ಧಿಯಿಂದ ಮನಸ್ಸನ್ನು ವಶಪಡಿಸಿಕೊಂಡು ದುರ್ಜಯವಾದ ಕಾಮಾದಿ ಶತ್ರುಗಳನ್ನು ನಿಗ್ರಹಿಸು. (೩,೪೨–೪೩)

## ನಿಷ್ಕಾಮಕರ್ಮಯೋಗದ ಪ್ರಾಚೀನತೆ.

ಇಂಥ ಅವ್ಯಯವಾದ ನಿಷ್ಕಾಮಕರ್ಮಯೋಗವನ್ನು ಹಿಂದೆ ನಾನು ಸೂರ್ಯನಿಗೆ ಹೇಳಿದೆ. ಸೂರ್ಯನು ಮನುವಿಗೂ, ಮನುವು ಇಕ್ಷ್ವಾಕುವಿಗೂ ಹೇಳಿದನು. ಹೀಗೆ ಈ ನಿಷ್ಕಾಮ ಕರ್ಮಯೋಗವು ಪರಂಪರೆಯಿಂದ ಬಂದುದು. ಈಚೆಗೆ ಈ ಯೋಗವು ಮಲಿನವಾಗಿದೆ. ಸನಾತನವೂ ಶ್ರೇಷ್ಠವೂ ಆದ ಈ ಯೋಗವನ್ನು ಭಕ್ತನೂ ಮಿತ್ರನೂ ಆದ ನಿನಗೆ ಉಪದೇಶಿಸಿರುವೆನು."

(೪,೧–೩)

## ಜನ್ಮಗಳ ಪರಂಪರೆ.

೭ "ನಿನ್ನ ಜನ್ಮವು ಈಗಿನದು. ಸೂರ್ಯನ ಜನ್ಮವಾದರೋ ಆದಿಯಲ್ಲಾದುದು. ಹೀಗಿರುವಾಗ ನೀನಿದನ್ನು ಸೂರ್ಯನಿಗೆ

ಹೇಳಿದೆಯೆಂಬುದನ್ನು ನಂಬುವುದು ಹೇಗೆ? ಮತ್ತು ಕರ್ಮ ಯೋಗದ ರಹಸ್ಯವೇನು?" (೪–೪)

"ಹಾಗಲ್ಲ; ಅರ್ಜುನ, ಆತ್ಮನು ಅನೇಕ ಜನ್ಮಗಳನ್ನು ಎತ್ತುತ್ತಾನೆ. ನನ್ನ ಮತ್ತು ನಿನ್ನ ಜನ್ಮಗಳು ಎಷ್ಟೋಸಲ ಆಗಿಹೋಗಿವೆ. ಆದರೆ ನಾನದನ್ನು ಬಲ್ಲೆ; ನೀನರಿಯೆ. ಯದ್ಯಪಿ ನಾನು ಜನ್ಮವಿಲ್ಲದವನು. ಅವಿನಾಶಿ. ಎಲ್ಲ ಪ್ರಾಣಿಗಳ ನಿಯಾಮಕನು. ಆದರೂ ನನ್ನ ಮಾಯೆಯ ಬಲದಿಂದ ಜನ್ಮಧಾರಣ ಮಾಡತ್ತೇನೆ. (೪,೫–೬)

## ಭಗವಂತನ ಭರವಸೆ.

ಧರ್ಮವು ಮಲಿನವಾಗಿ ಅಧರ್ಮ ಹೆಚ್ಚಿದಾಗ ನಾನು ಅವತರಿಸುವೆನು. ಸಾಧುಗಳ ರಕ್ಷಣಕ್ಕಾಗಿ ದುಷ್ಟವಿನಾಶಕ್ಕಾಗಿ ಮತ್ತು ಧರ್ಮದ ಪುನರುದ್ಧಾರಕ್ಕಾಗಿ ಯುಗ ಯುಗಗಳಲ್ಲಿಯೂ ಅವತರಿಸುವೆನು. ಹೀಗೆ ನನ್ನ ದಿವ್ಯಜನ್ಮಗಳ ಮತ್ತು ಕರ್ಮದ ರಹಸ್ಯವನ್ನು ಅರಿತವನಿಗೆ ಪುನರ್ಜನ್ಮವಿಲ್ಲ. ರಾಗ ಭಯ ಕ್ರೋಧಗಳನ್ನು ಬಿಟ್ಟು ನನ್ನನ್ನು ಆಶ್ರಯಿಸಿದ ಸದ್ಭಕ್ತರು ಪವಿತ್ರರಾಗಿ ನನ್ನ ಸ್ವರೂಪವನ್ನು ಹೊಂದುವರು. (೪,೭–೧೦)

ಯಾರು ಯಾರು ಹೇಗೆ ಹೇಗೆ ಆಶ್ರಯಿಸುವರೋ ಅವರವರಿಗೆ ಅಂಥ ಫಲವನ್ನೇ ಕೊಡುವೆನು. ಒಟ್ಟಿನಲ್ಲಿ ಅವರು ನನ್ನ ಮಾರ್ಗವನ್ನು ಅನುಸರಿಸುವರು. ಸಕಾಮರು ಬೇಗ ಫಲಪಡೆಯಲು ಇಂದ್ರಾದಿದೇವತೆಗಳನ್ನು ಆರಾಧಿಸುವರು. (೪,೧೧–೧೨)

ಅವರವರ ಗುಣ ಕರ್ಮಗಳಿಗೆ ಅನುಗುಣವಾಗಿ ನಾಲ್ಕು ವರ್ಣಗಳನ್ನು ವಿಂಗಡಿಸಿದ್ದೇನೆ. ನಾನು ಅವಿನಾಶಿ ಮತ್ತು ಕರ್ತೃತ್ವವಿಲ್ಲದವನು. ಕರ್ಮಲೇಪವೆನಗಿಲ್ಲ. ಕರ್ಮದಲ್ಲಿ ನನಗೆ ಆಸೆಯಿಲ್ಲ. ಚಿರಂತನ ಕಾಲದಿಂದಲೂ ಎಲ್ಲಾ ಮುಮುಕ್ಷುಗಳೂ ಹೀಗೆಯೇ ಕರ್ಮವೆಸಗಿ ಕರ್ಮಬಂಧದಿಂದ ಮುಕ್ತರಾಗಿದ್ದಾರೆ. (೪,೧೩–೧೫)

## ಕರ್ಮಮೀಮಾಂಸೆ.

ಕರ್ಮ ಮತ್ತು ಅಕರ್ಮಗಳ ಬಗ್ಗೆ ಶಾಸ್ತ್ರಜ್ಞರೂ ಮೋಹಗೊಂಡಿದ್ದಾರೆ. ಅದನ್ನೇ ಈಗ ಬಿಡಿಸಿ ಹೇಳುತ್ತೇನೆ. ಕರ್ಮ, ಅಕರ್ಮ ಮತ್ತು ವಿಕರ್ಮಗಳೆಂದರೇನು ? ಸಾಮಾನ್ಯವಾಗಿ ಕರ್ಮವೆಂದರೆ ಶಾಸ್ತ್ರೋಕ್ತವಾದ ಕರ್ಮ. ಅಕರ್ಮವೆಂದರೆ ಕರ್ಮರಹಿತವಾದ ವಸ್ತು. ವಿಕರ್ಮವೆಂದರೆ ಶಾಸ್ತ್ರವಿರುದ್ಧವಾದ ಕರ್ಮ. ಇವುಗಳಲ್ಲಿ ನಮ್ಮ ಶರೀರವು ಶಾಸ್ತ್ರೋಕ್ತಕರ್ಮಕ್ಕೆ ಬದ್ಧವಾಗಿದೆ. ಒಳಗಿರುವ ಆತ್ಮನು ಕರ್ಮರಹಿತನು. ಕಾಮ ಕ್ರೋಧಾದಿಗಳಿಗೆ ಅಧೀನವಾಗಿ ಮಾಡುವ ಕರ್ಮಗಳೇ ವಿಕರ್ಮಗಳು. ಇವುಗಳ ಗತಿಯು ಬಹಳ ಗೂಢ! (೪,೧೬–೧೭)

ಮಾನವನು ಶಾಸ್ತ್ರೋಕ್ತವಾದ ಕರ್ಮಗಳನ್ನು ಈಶ್ವರಾರ್ಪಿತ ಬುದ್ಧಿಯಿಂದ ಅನಾಸಕ್ತನಾಗಿ ಮಾಡುವುದಾದರೆ ಅವನು ಕರ್ಮದಲ್ಲಿ ಅಕರ್ಮವನ್ನು ಎಸಗಿದಂತಾಗುತ್ತದೆ. ಇನ್ನು ಕರ್ಮರಹಿತನಾದ ಆತ್ಮನು ಲೋಕಸಂಗ್ರಹಕ್ಕಾಗಿ ಶಾಸ್ತ್ರೋಕ್ತವಾದ ಕರ್ಮಗಳಲ್ಲಿ ತೊಡಗಿ ನಿಷ್ಕಾಮಬುದ್ಧಿಯಿಂದ ಕೇವಲ

ಕರ್ತವ್ಯಕ್ಕಾಗಿ ಕರ್ಮಮಾಡಿದರೆ ಅಕರ್ಮದಲ್ಲಿ ಕರ್ಮವನ್ನು ಕಂಡಂತಾಗುತ್ತದೆ. ಕರ್ಮಗಳ ರಹಸ್ಯವನ್ನರಿತವನೆ ಜಾಣ. ಅವನೇ ಯೋಗಿ. (೪–೧೮)

ಹೀಗೆ ಕಾಮ ಸಂಕಲ್ಪಗಳಿಲ್ಲದೆ ಮಾಡುವ ಕರ್ಮಗಳೇ ಪವಿತ್ರವಾದವು. ಜ್ಞಾನಾಗ್ನಿಯಿಂದ ಕರ್ಮಬಂಧವನ್ನು ಸುಟ್ಟವನೇ ಪಂಡಿತ. ನಿಷ್ಕಾಮನೂ ನಿತ್ಯತೃಪ್ತನೂ ಸ್ವತಂತ್ರನೂ ಆದವನಿಗೆ ಕರ್ಮಬಂಧವಿಲ್ಲ. ಜಿತೇಂದ್ರಿಯನೂ ನಿರಾಶನೂ ಅನಾಸಕ್ತನೂ ಆದವನಿಗೆ ಕರ್ಮಲೇಪವಿಲ್ಲ. (೪,೧೯–೨೧)

ತಮ್ಮ ತಮ್ಮ ಕರ್ಮಾನುಸಾರವಾಗಿ ದೊರೆತುದರಲ್ಲಿ ಸಂತುಷ್ಟರಾಗಿ, ಶೀತೋಷ್ಣ ಮೊದಲಾದ ದ್ವಂದ್ವಗಳಲ್ಲಿ ಸಮಬುದ್ಧಿಯಿಟ್ಟು, ಮತ್ಸರವಿಲ್ಲದೆ, ಕರ್ಮ ಫಲಾಫಲಗಳ ವಿಷಯದಲ್ಲಿ ತಟಸ್ಥರಾಗಿರುವವರಿಗೆ ಕರ್ಮ ಬಂಧಕವಲ್ಲ. (೪,೨೨)

ಯಜ್ಞಾದಿಗಳನ್ನು ಮಾಡುವಾಗ ಬ್ರಹ್ಮಾರ್ಪಣ, ಅರ್ಪಿಸುವ ಹವನ ದ್ರವ್ಯಗಳು, ಅರ್ಪಿಸುವವನೂ ಸಹ ಬ್ರಹ್ಮವೆಂದೇ ಭಾವಿಸಬೇಕು. ಎಲ್ಲೆಡೆಯೂ ಬ್ರಹ್ಮದೃಷ್ಟಿಯನ್ನಿಟ್ಟು ಕರ್ಮಮಾಡಿದರೆ ಅವನು ಬ್ರಹ್ಮವೇ ಆಗುವನು. (೪,೨೩–೨೪)

ಕರ್ಮಯೋಗಿಗಳು ಇಂದ್ರಾದಿ ದೇವತೆಗಳನ್ನುದ್ದೇಶಿಸಿ ಯಜ್ಞಮಾಡುವರು. ಜ್ಞಾನಯೋಗಿಗಳು ಜ್ಞಾನಯಜ್ಞದಿಂದ ಬ್ರಹ್ಮರೂಪವಾದ ಅಗ್ನಿಯಲ್ಲಿ ಆತ್ಮವೆಂಬ ಹವಿಸ್ಸನ್ನು ಹೋಮ

ಮಾಡುವರು. ಮತ್ತೆ ಕೆಲವರು ಕಿವಿಮೊದಲಾದ ಇಂದ್ರಿಯ ಗಳನ್ನು ಸಂಯಮ (ನಿಗ್ರಹ) ವೆಂಬ ಅಗ್ನಿಯಲ್ಲಿ ಹೋಮ ಮಾಡುವರು. ಅಂದರೆ ಇಂದ್ರಿಯನಿಗ್ರವೂ ಒಂದು ಯಜ್ಞವೆ. ಹಾಗೆಯೇ ಶಬ್ದಾದಿ ವಿಷಯಗಳನ್ನು ಇಂದ್ರಿಯಾಗ್ನಿಯಲ್ಲಿ ಹೋಮಮಾಡಬೇಕು. ಎಂದರೆ ಸ್ವೀಕರಿಸುವ ವಿಷಯಗಳನ್ನು "ಯಜ್ಞು ಹೋಷಿ" ಎಂಬ ಉಪದೇಶದಂತೆ ಈಶ್ವರಾರ್ಪಿತಮಾಡಿ ಅನುಭವಿಸಬೇಕು. ಮತ್ತೆ ಕೆಲವರು ಇಂದ್ರಿಯಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಜ್ಞಾನದಿಂದ ಪ್ರಜ್ವಲಿಸುವ ಆತ್ಮಧ್ಯಾನ ವೆಂಬ ಯೋಗಾಗ್ನಿಯಲ್ಲಿ ಹೋಮಮಾಡುವರು. ಅಂದರೆ ಪರಮಾತ್ಮನಲ್ಲಿ ತನ್ಮಯರಾಗುತ್ತಾರೆ. (೪, ೨೫–೨೭)

ಯಜ್ಞಗಳು ಅನೇಕವಿಧ. ಹವಿಸ್ಸನ್ನು ಬೆಂಕಿಯಲ್ಲಿ ಹೋಮ ಮಾಡುವುದು "ದ್ರವ್ಯಯಜ್ಞ". ಇದರಂತೆ 'ತಪೋ ಯಜ್ಞ' 'ಯೋಗಯಜ್ಞ' (ಅಷ್ಟಾಂಗ ಯೋಗಾಭ್ಯಾಸ). ಸದ್ವಿದ್ಯೆಯನ್ನು ಸಂಪಾದಿಸುವುದು 'ಜ್ಞಾನಯಜ್ಞ' ಇತ್ಯಾದಿ. ಪ್ರಾಣಾಯಾಮ ಮಾಡುವವರು ಮತ್ತು ಆಹಾರ ಸಂಯಮ ಮಾಡುವವರು ಯೋಗನಿಷ್ಠರೆನಿಸುವರು. ಇವೆಲ್ಲವೂ ಪಾಪ ನಾಶಕವಾದ ಯಜ್ಞಗಳೇ. ಕರ್ಮಕಾಂಡದಲ್ಲಿ ಇವು ಉಕ್ತ ವಾಗಿವೆ. ಇವನ್ನು ನಾನು ತಿಳಿಸಿದಂತೆ ನಿಷ್ಕಾಮದಿಂದ ಮಾಡಿದರೆ ಮುಕ್ತನಾಗುವೆ. (೪, ೨೮–೩೨)

## ಜ್ಞಾನಯಜ್ಞದ ಹಿರಿಮೆ

ಮೇಲೆ ಹೇಳಿದವುಗಳಲ್ಲಿ ದ್ರವ್ಯ ಯಜ್ಞಕ್ಕಿಂತ ಜ್ಞಾನ

ಯಜ್ಞವು ಶ್ರೇಷ್ಠವಾದುದು. ಎಲ್ಲ ಕರ್ಮಗಳು ಜ್ಞಾನದಲ್ಲಿ ಪರ್ಯವಸಾನವಾಗುತ್ತವೆ. ಆತ್ಮಜ್ಞಾನವನ್ನು ಜ್ಞಾನಿಗಳ ಸೇವೆ ಮಾಡಿ ಅರಿಯಬೇಕು. ಜ್ಞಾನವೆಂಬ ನಾವೆಯು ಎಂಥ ಪಾಪಿಯನ್ನಾದರೂ ದಡಕ್ಕೆ ಒಯ್ಯುವುದು. ಪ್ರಜ್ವಲಿಸುವ ಅಗ್ನಿಯು ಸೌದೆಗಳನ್ನು ಸುಟ್ಟು ಬೂದಿಮಾಡುವಂತೆ ಜ್ಞಾನಾಗ್ನಿಯು ಕರ್ಮಗಳನ್ನು ಸುಡುವುದು. ಜ್ಞಾನಕ್ಕೆ ಸಮಾನವಾದುದು ಪ್ರಪಂಚದಲ್ಲಿ ಯಾವುದೂ ಇಲ್ಲ. ನಿಷ್ಕಾಮದಿಂದ ಕರ್ಮಮಾಡುವವನಿಗೆ ಕಾಲಕ್ರಮದಲ್ಲಿ ಇಂಥ ಜ್ಞಾನವು ಸಿದ್ಧಿಸುವುದು. (೪,೩೩–೩೮)

## ಶ್ರದ್ಧೆ ಮತ್ತು ಸಮತೆಗಳ ಪ್ರಾಮುಖ್ಯತೆ.

ಎಲ್ಲಕ್ಕೂ ಶ್ರದ್ಧೆ ಮುಖ್ಯವಾದುದು. ನಂಬುಗೆ ಯಿಲ್ಲದವನಿಗೆ ಯಾವುದೂ ಸಿದ್ಧಿಸದು. ಗುರುಹಿರಿಯರಲ್ಲಿಯೂ ಸಚ್ಛಾಸ್ತ್ರದಲ್ಲಿಯೂ ನಂಬಿಕೆಯಿರಬೇಕು. ಜಿತೇಂದ್ರಿಯನಾಗಿ ಈಶ್ವರಾರ್ಪಿತ ಬುದ್ಧಿಯುಳ್ಳವನಿಗೆ ಜ್ಞಾನವು ಲಭಿಸುತ್ತದೆ. ಅವನು ಶೀಘ್ರದಲ್ಲಿ ಕರ್ಮಬಂಧನದಿಂದ ಮುಕ್ತನಾಗಿ ಪರಮಶಾಂತಿಯನ್ನು ಪಡೆಯುವನು. ಅಜ್ಞಾನಿಯೂ, ಶ್ರದ್ಧೆಯಿಲ್ಲದವನೂ ಸಂದೇಹಗ್ರಸ್ತನೂ ಆದವನಿಗೆ ಇಹ-ಪರಗಳಲ್ಲಿ ಸುಖವಿಲ್ಲ.

(೪,೩೯–೪.೮)

ಸಮತೆಯೂ ಸಾಧಕನಿಗೆ ಆವಶ್ಯಕ. ದ್ವಂದ್ವಗಳಲ್ಲಿ ಸಮತೆಯನ್ನು ಗಳಿಸಿ ಕರ್ಮಫಲತ್ಯಾಗಮಾಡಿ ಜ್ಞಾನದಿಂದ ಸಂದೇಹಗಳನ್ನು ಕಳೆದುಕೊಂಡವನಿಗೆ ಕರ್ಮಬಂಧನವಿಲ್ಲ. ಅಜ್ಞಾನದಿಂದುಂಟಾಗುವ ಸಂದೇಹಗಳನ್ನು ಜ್ಞಾನ ಖಡ್ಗದಿಂದ

ಕತ್ತರಿಸಿ ಸಮತೆಯೆಂಬ ಯೋಗವನ್ನು ಸಾಧಿಸಬೇಕು."

(೪,೪೧–೪೨)

೮ "ಕೃಷ್ಣ, ಕರ್ಮತ್ಯಾಗ (ಸಂನ್ಯಾಸ) ಮತ್ತು ಕರ್ಮಯೋಗ ಇವೆರಡನ್ನೂ ನೀನು ಪ್ರಶಂಸಿಸಿದೆ. ಇವೆರಡರಲ್ಲಿ ನನಗೆ ಯಾವುದು ಶ್ರೇಯಸ್ಕರ? ಯೋಗದ ವಿಚಾರವೇನು?"

(೫,೧)

"ಹೌದು ಅರ್ಜುನ, ಕರ್ಮತ್ಯಾಗ ಮತ್ತು ಕರ್ಮಯೋಗ ಇವೆರಡೂ ಮೋಕ್ಷಪ್ರದಗಳೇ. ಇವುಗಳಲ್ಲಿ ಮಲಿನಾಂತಃಕರಣ ರಾದ ನಿನ್ನಂತಹವರಿಗೆ ಕರ್ಮತ್ಯಾಗಕ್ಕಿಂತ ಕರ್ಮಯೋಗವೇ ಶ್ರೇಷ್ಠ.

(೫–೨)

## ಕರ್ಮಯೋಗದ ರಹಸ್ಯ.

ದ್ವಂದ್ವಾತೀತನಾಗುವುದೇ ಯೋಗದ ಗುರಿ. ನಿಷ್ಕಾಮ ಕರ್ಮಮಾಡುವವನೂ ಸಂನ್ಯಾಸಿಯೇ. ಏಕೆಂದರೆ ಅವನಿಗೆ ಕರ್ಮಬಂಧನವಿಲ್ಲ. ಜ್ಞಾನಯೋಗ (ಕರ್ಮಸಂನ್ಯಾಸ) ಮತ್ತು ಕರ್ಮಯೋಗಗಳನ್ನು ಬೇರೆಬೇರೆ ಎಂದು ಭಾವಿಸಬಾರದು. ಏಕೆಂದರೆ ಅವೆರಡೂ ಮೋಕ್ಷಸಾಧಕಗಳೆ. ಯಾವುದನ್ನು ಬೇಕಾದರೂ ಮಾಡಬಹುದು. ಸಂನ್ಯಾಸಿ (ಜ್ಞಾನಿ)ಗೆ ದೊರೆ ಯುವ ಮೋಕ್ಷವೇ ನಿಷ್ಕಾಮಕರ್ಮಯೋಗಿಗೂ ಲಭಿಸುತ್ತದೆ.

(೫,೩–೪)

ನಿಷ್ಕಾಮ ಕರ್ಮಾನುಷ್ಠಾನವಿಲ್ಲದ ಸಂನ್ಯಾಸವು ದುಃಖ ಕರ. ನಿಷ್ಕಾಮಕರ್ಮದಿಂದ ಅಂತಃಕರಣ ಶುದ್ಧವಾಗುತ್ತದೆ. ಆದರಿಂದ ಅವನು ಸುಜ್ಞಾನವನ್ನು ಪಡೆದು ಬ್ರಹ್ಮಭಾವ ಪಡೆಯುವನು. ಯೋಗಯುಕ್ತನಾಗಿ ಪರಮಾತ್ಮನನ್ನು ಬಲ್ಲ ಆತ್ಮಜ್ಞಾನಿಯು ಇಂದ್ರಿಯಗಳಿಂದ ವಿಷಯೋಪಭೋಗವನ್ನು ಮಾಡುತ್ತಿದ್ದರೂ ಅನಾಸಕ್ತನಾಗಿದ್ದರೆ ಅವನು ನೀರಿನಲ್ಲಿಯ ಕಮಲದೆಲೆಯಂತೆ ಪಾಪವಿಲ್ಲದವನಾಗಿರುತ್ತಾನೆ. ನಿಷ್ಕಾಮಕರ್ಮ ಯೋಗಿಯು ತಾನು ಮಾಡುವೆನೆಂಬ ಅಭಿಮಾನ ಬಿಟ್ಟು ಮನಸ್ಸು ಮಾತು ಬುದ್ಧಿಗಳಿಂದ ಮತ್ತು ಇಂದ್ರಿಯಗಳಿಂದ ಚಿತ್ತಶುದ್ಧಿಗಾಗಿ ಕರ್ಮಮಾಡುತ್ತಾನೆ. (೫,೫–೧೧)

ನಿಷ್ಕಾಮ ಕರ್ಮಮಾಡುವವನು ಯುಕ್ತನು. ಸಕಾಮ ಕರ್ಮ ಮಾಡುವವನು ಅಯುಕ್ತನು. ಇವರಲ್ಲಿ ಮೊದಲನೆಯವನು. ಪರಮಶಾಂತಿ ಪಡೆಯುವನು. ಎರಡನೆಯವನು ಕರ್ಮಬಂಧಕ್ಕೆ ಸಿಕ್ಕಿಕೊಳ್ಳುವನು. (೫–೧೨) ಸಂಯಮಿಯು ಎಲ್ಲ ಕರ್ಮಗಳನ್ನು ಮನಸ್ಸಿನಿಂದ ತ್ಯಾಗಮಾಡಿರುವುದರಿಂದ ಅವನು ಒಂಬತ್ತು * ಬಾಗಿಲುಗಳುಳ್ಳ ಈ ಶರೀರದಲ್ಲಿದ್ದರೂ ಯಾವುದರಲ್ಲಿಯೂ ಆಸಕ್ತಿವಹಿಸದೆ ಸಾಕ್ಷಿಯಂತೆ ಸುಖವಾಗಿರುತ್ತಾನೆ. ಕರ್ತೃತ್ವ ಮತ್ತು ಕರ್ಮಫಲ ಇವುಗಳ ಸಂಯೋಗವು ಪ್ರಕೃತಿಗೆ ಸೇರಿದ್ದು. ಆತ್ಮನಿಗೆ ಸೇರಿದ್ದಲ್ಲ ಆತ್ಮನಿಗೆ ಪಾಪ

* ಕಿವಿಗಳು ೨, ಮೂಗಿನ ಹೊಳ್ಳೆಗಳು ೨, ಕಣ್ಣುಗಳು ೨, ಬಾಯಿ ೧, ಮೂತ್ರದ್ವಾರ ೧, ಮಲದ್ವಾರ ೧ =ಇವು ಶರೀರದ ನವದ್ವಾರಗಳು.

ಪುಣ್ಯಗಳ ಲೇಪವಿಲ್ಲ. ಅಜ್ಞಾನದಿಂದ ಜ್ಞಾನವು ಮಲಿನವಾಗಲು ಮಾನವನು ತಾನೇ ಕರ್ತೃವೆಂದು ಭಾವಿಸಿ ಮೋಹಗೊಳ್ಳುತ್ತಾನೆ. ಅಜ್ಞಾನವೆಂಬ ಕತ್ತಲನ್ನು ಜ್ಞಾನ ಸೂರ್ಯನಿಂದ ಹೋಗಲಾಡಿಸಬೇಕು. (೫,೧೩–೧೭)

## ಸಮದರ್ಶಿತ್ವ

ಸಮದರ್ಶಿಯು ವಿದ್ಯಾವಿನಯ ಶೀಲನಾದ ಬ್ರಾಹ್ಮಣನಲ್ಲಿಯೂ, ಹಸು, ಆನೆ, ನಾಯಿ, ಚಂಡಾಲ, ಮತ್ತು ಶ್ವಪಾಕ ಮುಂತಾದವರಲ್ಲಿಯೂ ಬ್ರಹ್ಮವನ್ನೇ ಕಾಣುವನು. ಪ್ರಪಂಚವನ್ನು ಗೆದ್ದವನು ಸಮದರ್ಶಿಯೆ. ಬ್ರಹ್ಮವು ನಿಷ್ಕಳಂಕ ಮತ್ತು ಸಮತೆಯುಳ್ಳದ್ದು. ಅಂಥ ಬ್ರಹ್ಮವನ್ನು ಬಲ್ಲವನು ಸಮದರ್ಶಿಯೇ ಆಗುವನು. (೫,೧೮–೧೯)

ಇಷ್ಟವಸ್ತು ಲಭಿಸಿದರೆ ಅವನು ಹಿಗ್ಗುವುದಿಲ್ಲ. ಅನಿಷ್ಟವಾದರೆ ತಗ್ಗುವುದಿಲ್ಲ ಏಕೆಂದರೆ ಅವನ ಬುದ್ಧಿಯು ಬ್ರಹ್ಮದಲ್ಲಿ ಸ್ಥಿರವಾಗಿರುತ್ತದೆ. ಬಾಹ್ಯ ವಿಷಯಗಳಲ್ಲಿ ಆಸಕ್ತಿ ವಹಿಸದೆ ತನ್ನಲ್ಲಿ ತಾನು ಆನಂದವನ್ನು ಅನುಭವಿಸುವವನು ಜ್ಞಾನಯೋಗ ನಿಷ್ಠನಾಗಿ ಸದಾ ಸುಖದಲ್ಲಿ ಮಗ್ನನಾಗುತ್ತಾನೆ. (೫,೨೦–೨೧)

ಪಾಪದೂರನೂ ಸಂದೇಹರಹಿತನೂ ಎಲ್ಲ ಪ್ರಾಣಿಗಳಲ್ಲಿ ಪ್ರೀತಿಯುಳ್ಳವನೂ ಪ್ರಯತ್ನಶೀಲನೂ ಕಾಮಕ್ರೋಧಾದಿಗಳಿಲ್ಲದವನೂ ಮನೋನಿಗ್ರಹವುಳ್ಳವನೂ ಆತ್ಮಜ್ಞಾನಿಯೂ ಆದವನು

ಬ್ರಹ್ಮನಿರ್ವಾಣಕ್ಕೆ ಅರ್ಹನು. ಬಾಹ್ಯವಿಷಯಗಳಲ್ಲಿ ಅನಾಸಕ್ತ ನಾಗಿ ದೃಷ್ಟಿಯನ್ನು ಹುಬ್ಬುಗಳ ಮಧ್ಯದಲ್ಲಿ ನಿಲ್ಲಿಸಿ ಪ್ರಾಣಾಪಾನ ಗಳ ಗತಿಯನ್ನು ಸಮವಾಗಿಟ್ಟುಕೊಂಡು ಇಂದ್ರಿಯ, ಮನಸ್ಸು, ಬುದ್ಧಿಗಳನ್ನು ವಶಪಡಿಸಿಕೊಂಡು ಕಾಮಕ್ರೋಧಾದಿಗಳನ್ನು ಗೆದ್ದವನು ಮುಕ್ತನು. (೫,೨೭–೨೮)

## ಯೋಗಮೀಮಾಂಸೆ

ಕ್ರಿಯಾರಹಿತನಾದ ಮಾತ್ರದಿಂದ ಸಂನ್ಯಾಸಿ ಯೋಗಿ ಯಾಗಲಾರನು. ನಿಷ್ಕಾಮದಿಂದ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುವವನೇ ಸಂನ್ಯಾಸಿ ಮತ್ತು ಯೋಗಿ. ಮನಸ್ಸಿನ ಸಂಕಲ್ಪ ವನ್ನು ತ್ಯಜಿಸದಿದ್ದರೆ ಯೋಗಿಯಾಗಲಾರ. ಶ್ರುತಿಗಳಲ್ಲಿ ಹೇಳಿ ರುವ ಸಂನ್ಯಾಸವು ಇದೇ; ಯೋಗವನ್ನು ಸಾಧಿಸಬೇಕಾದರೆ ನಿಷ್ಕಾಮಕರ್ಮ ಮಾಡಬೇಕು. ಯೋಗಾರೂಢನಿಗೆ ಶಾಂತಿ ಬೇಕು. ಯೋಗಾರೂಢನೆಂದರೆ ಅನಾಸಕ್ತನೆ! (೬,೧–೪)

ಮನುಷ್ಯನು ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳ ಬೇಕು. ಏಕೆಂದರೆ ಜೀವನಿಗೆ ವಿವೇಕಯುಕ್ತವಾದ ಬುದ್ಧಿಯೇ ಬಂಧು. ಅವಿವೇಕಯುಕ್ತವಾದ ಬುದ್ಧಿಯೇ ಶತ್ರು. ಶರೀ ರೇಂದ್ರಿಯವರ್ಗವನ್ನು ವಿವೇಕಯುಕ್ತವಾದ ಮನಸ್ಸಿನಿಂದ ಗೆದ್ದವನ ಸ್ವರೂಪವೇ ಅವನಿಗೆ ಬಂಧು. ಜಿತೇಂದ್ರಿಯನು ತನಗೆ ತಾನೇ ಮಿತ್ರ. ಅಜಿತೇಂದ್ರಿಯನು ತನಗೆ ತಾನೆ ಶತ್ರು. ಜಿತಾತ್ಮನಿಗೆ ಸಮತೆಯು ಸಿದ್ಧಿಸುತ್ತದೆ. ಸಮತಾಶೀಲನ ಸ್ಥಾನವು ವಿಶಿಷ್ಟವಾದುದು. (೬,೫–೭)

ಯೋಗಿಗೆ ಈ ಸಮತೆ ಸಿದ್ಧಿಸಬೇಕು. ಜಿತೇಂದ್ರಿಯನು ಚಿನ್ನ ಮತ್ತು ಮಣ್ಣುಹೆಂಟೆಗಳನ್ನು ಸಮನಾಗಿ ಕಾಣುವವನು. ಶತ್ರು ಮಿತ್ರರಲ್ಲಿ ಸಮಭಾವವುಳ್ಳವನೂ ಪ್ರಶಾಂತಮನಸ್ಸುಳ್ಳವನೂ ಆದಯೋಗಿ ಸ್ಥಿರಚಿತ್ತನಾಗಿ ಏಕಾಂತದಲ್ಲಿ ಪರಮಾತ್ಮನೊಡನೆ ರಮಿಸುತ್ತಾನೆ. (೬,೮–೧೦)

## ಯೋಗ ಮಾಡುವ ವಿಧಾನ

ಪವಿತ್ರವಾದ ಸ್ಥಳದಲ್ಲಿ ದರ್ಭೆ, ಜಿಂಕೆಯ ಚರ್ಮ, ಅಥವಾ ವಸ್ತ್ರಗಳನ್ನು ಹಾಸಿ, ಆಸನದ ಮೇಲೆ ಏಕಾಗ್ರತೆಯಿಂದ ಕುಳಿತು ಕೊಳ್ಳಬೇಕು. ಮನಸ್ಸಿನಿಂದ ಇಂದ್ರಿಯಗಳನ್ನು ವಶಪಡಿಸಿಕೊಂಡು ಆತ್ಮಶುದ್ಧಿಗಾಗಿ ಯೋಗಮಾಡಬೇಕು. ದೇಹ, ಕತ್ತು, ತಲೆ ಇವುಗಳನ್ನು ಸಮವಾಗಿ ಸ್ಥಿರಗೊಳಿಸಿ ಮೂಗಿನ ತುದಿಯ ಮೇಲೆ ದೃಷ್ಟಿಯಿಟ್ಟು ಶಾಂತಿಯಿಂದ ಭಯವಿಲ್ಲದೆ ಬ್ರಹ್ಮಚರ್ಯದಲ್ಲಿ ದೃಢನಾಗಿ ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಬೇಕು. ಹೀಗೆ ನಿರಂತರವೂ ಯೋಗಾಭ್ಯಾಸ ಮಾಡುವುದರಿಂದ ಅಂತಃಕರಣಗಳು ಪರಿಶುದ್ಧವಾಗುವವು. ಅದರಿಂದ ಬ್ರಹ್ಮನಿರ್ವಾಣವು ಸಿದ್ಧಿಸಿ ಪರಮಶಾಂತಿ ಲಭಿಸುವುದು.

(೬,೧೧–೧೫)

ಅತಿಭೋಜನ, ನಿರಾಹಾರ, ಅತಿನಿದ್ರೆ ಅಥವಾ ನಿದ್ರಾ ರಾಹಿತ್ಯವುಳ್ಳವರಿಗೆ ಯೋಗವು ಸಿದ್ಧಿಸುವುದಿಲ್ಲ. ನಿಯತಾಹಾರ, ವಿಹಾರ, ಮಿತವಾದ ಕಾರ್ಯಕಲಾಪಗಳು, ಉಚಿತವಾದ

ನಿದ್ರೆ ಎಚ್ಚರಗಳುಳ್ಳವನಿಗೆ ಮಾತ್ರ ಯೋಗವು ಸಿದ್ಧಿಸುತ್ತದೆ.

(೬,೧೬–೧೭)

ಗಾಳಿಯಿಲ್ಲದ ಕಡೆ ಅಲುಗಾಡದಿರುವ ದೀಪದಂತೆ ಪರಮಾತ್ಮನಲ್ಲಿ ಮುಗ್ನನಾದ ಯೋಗಿಯು ನಿಶ್ಚಲನಾಗಿರುತ್ತಾನೆ. ಯೋಗಸಾಧನೆಯಿಂದ ಶಬ್ದಾದಿ ವಿಷಯಗಳಲ್ಲಿ ಹರಿಯುವ ಮನಸ್ಸು ಹಿಂದಿರುಗುತ್ತದೆ. ಧಾರಣಾಯುಕ್ತವಾದ ಬುದ್ಧಿಯ ಸಹಾಯದಿಂದ ಮನಸ್ಸು ಆತ್ಮಾಭಿಮುಖವಾಗಿ ಆತ್ಮನಲ್ಲಿ ತನ್ಮಯವಾಗುತ್ತದೆ. ಯೋಗವು ಚಂಚಲವಾದ ಮನಸ್ಸನ್ನು ಎಳೆತಂದು ಆತ್ಮನಲ್ಲಿ ನಿಲ್ಲಿಸುತ್ತದೆ. ಇಂಥ ಯೋಗಸಾಧನೆಯಿಂದ ಮನಸ್ಸು ಪ್ರಸನ್ನವಾಗುತ್ತದೆ. ಪಾಪನಾಶವಾಗುತ್ತದೆ. ಬ್ರಹ್ಮಭಾವ ಲಭಿಸಿ ಸುಖವಾಗುತ್ತದೆ. (೬,೧೯–೨೮)

ಯೋಗಯುಕ್ತನು ಸಮದರ್ಶಿ. ಅವನು ಎಲ್ಲ ಪ್ರಾಣಿಗಳಲ್ಲಿ ತಾನಿರುವುದಾಗಿಯೂ ತನ್ನಲ್ಲಿ ಎಲ್ಲ ಭೂತಗಳೂ ಇರುವುವೆಂದೂ ತಿಳಿಯುತ್ತಾನೆ. ಅವನು ಪ್ರಪಂಚದಲ್ಲೆಲ್ಲ ನನ್ನನ್ನು ಕಾಣುವನು. ನನ್ನಲ್ಲಿ ನಿಖಿಲ ವಿಶ್ವವನ್ನು ಕಾಣುವನು. ಅಂಥವನಿಗೆ ನಾನು ಕಾಣುವೆನು. ಅವನು ನನಗೂ ಕಾಣುವನು. ಎಲ್ಲ ಭೂತಗಳಲ್ಲಿರುವ ನನ್ನನ್ನು ಅನನ್ಯಭಾವದಿಂದ ಭಜಿಸುವವನು ನನ್ನಲ್ಲಿಯೇ ಇರುವನು. ತನ್ನಂತೆ ಎಲ್ಲ ಪ್ರಾಣಿಗಳನ್ನು ಕಾಣುವ ಯೋಗಿಯೇ ಬ್ರಹ್ಮಜ್ಞಾನಿ. ಅವನೇ ಸರ್ವಶ್ರೇಷ್ಠನು."

(೬,೨೯-೩೨)

## ಮನಸ್ಸು ದುರ್ಗ್ರಾಹ್ಯ.

೯ "ಮಧುಸೂದನ, ನೀನು ಹೇಳಿದ ಸಮತೆಯೆಂಬ ಯೋಗವನ್ನು ಸಾಧಿಸುವುದು ನನ್ನಿಂದ ಆಗದ ಮಾತು. ಏಕೆಂದರೆ ಮನಸ್ಸು ಚಂಚಲ. ಅದು ಬಲವಾದುದು. ಭೇದಿಸಲಶಕ್ಯವಾದುದು. ಬಯಲಿನಲ್ಲಿ ಗಾಳಿಯನ್ನು ಕಟ್ಟುವುದು ಹೇಗೆ ಅಸಾಧ್ಯವೊ ಅದರಂತೆ ಮನಸ್ಸನ್ನು ನಿಲ್ಲಿಸುವುದು ಅಸಾಧ್ಯ "

(೬,೩೩–೩೪)

"ನಿಜ, ಮನಸ್ಸು ದುರ್ಗ್ರಾಹ್ಯವೇ ಸರಿ. ಮನಸ್ಸಿನ ಚಾಂಚಲ್ಯವನ್ನು ತಡೆಯುವುದು ಕಷ್ಟ. ಮನೋನಿಗ್ರಹವು ಅಭ್ಯಾಸ ಮತ್ತು ವೈರಾಗ್ಯಗಳಿಂದ ಸಾಧ್ಯವಾಗುತ್ತದೆ. ಅಭ್ಯಾಸ ಮತ್ತು ವೈರಾಗ್ಯಗಳಿಲ್ಲದಿದ್ದರೆ ಯೋಗವೇ ಸಿದ್ಧಿಸದು. ಪ್ರಯತ್ನಶೀಲನಾಗಿ ಅಂತಃಕರಣಗಳನ್ನು ವಶಪಡಿಸಿಕೊಂಡವನಿಗೆ ಇದು ಸುಲಭ."

(೬,೩೫–೩೬)

## ಯೋಗಭ್ರಷ್ಟನ ಸ್ಥಿತಿ.

೧೦ "ಭಗವನ್, ಶ್ರದ್ಧಾಳುವಾದರೂ ಸಾಕಷ್ಟು ಪ್ರಯತ್ನ ಮಾಡದಿರುವುದರಿಂದ ಯೋಗಭ್ರಷ್ಟನಾದರೆ ಅವನ ಗತಿಯೇನು? ಬ್ರಹ್ಮ ಮಾರ್ಗದಿಂದ ದಾರಿತಪ್ಪಿದ ಅವನು ಚದುರಿದ ಮೋಡಗಳಂತೆ ಉಭಯ ಭ್ರಷ್ಟನಾಗುವನೆ?"

(೬,೩೭–೩೯)

"ಇಲ್ಲ ಅರ್ಜುನ, ಯೋಗಭ್ರಷ್ಟನಾದ ಮಾತ್ರಕ್ಕೆ ಇಹ-ಪರಗತಿಯಿಲ್ಲವೆಂದು ಭಾವಿಸಬೇಡ. ಉತ್ತಮಕೆಲಸ ಮಾಡು

ವವನಿಗೆ ಎಂದಿಗೂ ದುರ್ಗತಿಯಿಲ್ಲ. ಅಂಥವನು ಪುಣ್ಯಶಾಲಿಗಳು ಹೊಂದುವ ಸ್ಥಾನದಲ್ಲಿ ಬಹುಕಾಲವಿದ್ದು, ತರುವಾಯ ಉತ್ತಮರ ಮನೆಯಲ್ಲಿ ಹುಟ್ಟುತ್ತಾನೆ. ಅಥವಾ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ. ಆದರೆ ಇಂಥ ಮಹಾತ್ಮರ ಜನ್ಮವು ಅಪರೂಪ.

ಹೀಗೆ ಜನ್ಮ ಕಳೆದ ಯೋಗಭ್ರಷ್ಟನು ಪೂರ್ವಜನ್ಮದ ವಾಸನೆಯಂತೆ ಶ್ರವಣಾದಿ ಸಾಧನಗಳನ್ನು ಪಡೆದು ಮೋಕ್ಷಾಭಿಮುಖಿಯಾಗುತ್ತಾನೆ. ಅವನು ಪ್ರಯತ್ನ ಮಾಡದಿದ್ದರೂ ಹಿಂದಿನ ಅಭ್ಯಾಸವೇ ಅವನಿಗೆ ಆ ಪ್ರವೃತ್ತಿಯನ್ನುಂಟು ಮಾಡುತ್ತದೆ. ಹೀಗೆ ಪ್ರಗತಿ ಹೊಂದಿ ಪಾಪಮುಕ್ತನಾಗಿ ಅನೇಕ ಜನ್ಮಗಳಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ. ಈ ಯೋಗಿ ಎಲ್ಲರಿಗಿಂತ ಶ್ರೇಷ್ಠನು. ನೀನು ಅಂಥ ಯೋಗಿಯಾಗು."

(೬,೪೦–೪೬)



# ಭಕ್ತಿಯೋಗ

## ಈಶ್ವರ ತತ್ತ್ವ ಮತ್ತು ಈಶ್ವರ ಭಕ್ತಿ.

"ಅರ್ಜುನ, ನನ್ನಲ್ಲಿ ಮನಸ್ಸನ್ನಿಟ್ಟು ಯೋಗಾಭ್ಯಾಸ ಮಾಡಿದರೆ ನನ್ನನ್ನು ಹೇಗೆ ಅರಿಯಬಹುದೆಂಬದನ್ನು ಹೇಳುವೆನು. ಅನುಭವಯುಕ್ತವಾದ ಜ್ಞಾನವು ಅಳವಟ್ಟಮೇಲೆ ಅರಿಯ ಬೇಕಾದದ್ದು ಏನಿದೆ? ಸಾವಿರಜನರಲ್ಲಿ ಪ್ರಯತ್ನಮಾಡುವವನು ಒಬ್ಬ. ಅಂಥ ಪ್ರಯತ್ನಶೀಲರಲ್ಲಿ ಯಾವನೋ ಒಬ್ಬನು ಮಾತ್ರ ನನ್ನನ್ನು ಅರಿಯಬಲ್ಲನು." (೭,೧-೩)

## ಈಶ್ವರ ತತ್ತ್ವ.

"ಪೃಥಿವಿ ಮೊದಲಾದ ಐದು ಭೂತಗಳು ಮತ್ತು ಶಬ್ದ ಸ್ಪರ್ಶಾದಿ ತನ್ಮಾತ್ರೆಗಳು, ಅವುಗಳಿಗೆ ಕಾರಣವಾದ ಮಹತ್ತು, ಅವ್ಯಕ್ತ ಮತ್ತು ಸತ್ತ್ವ ರಜಸ್ತಮೋ ರೂಪವಾದ ಮೂಲಪ್ರಕೃತಿ ಇವೇ ಜಗತ್ತಿಗೆ ಕಾರಣವಾದ ನನ್ನ ಎಂಟು ಪ್ರಕೃತಿಗಳು. ಇದು ಅಪರಾ ಪ್ರಕೃತಿ. ಇದಕ್ಕಿಂತ ಶ್ರೇಷ್ಠವಾದುದು ಪರಾಪ್ರಕೃತಿ. ಅದು ಜೀವರೂಪವಾದುದು. ಈ ಪ್ರಕೃತಿಯ ಆಧಾರದಮೇಲೆ ಜಗತ್ತು ನಿಂತಿದೆ. ಎಲ್ಲ ಭೂತಗಳಿಗೂ ಇವೇ ಆಧಾರ. ಈ ಪ್ರಕೃತಿಗೆ ಕಾರಣನೂ ಸಂಹಾರ ಕರ್ತನೂ ಆದವನು ನಾನು. ನನಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಸೂತ್ರದಲ್ಲಿ

ಮಣಿಗಳು ಪ್ರೋಣಿಸಿರುವಂತೆ ಎಲ್ಲದರಲ್ಲಿಯೂ ನಾನು ಅನುಸ್ಯೂತವಾಗಿ ವ್ಯಾಪಿಸಿರುವೆನು. (೭,೪-೭)

ನೀರಿನಲ್ಲಿನ ರಸ, ಸೂರ್ಯಚಂದ್ರರಲ್ಲಿಯ ಪ್ರಭೆ, ವೇದಗಳಲ್ಲಿನ ಪ್ರಣವ, ಆಕಾಶದಲ್ಲಿರುವ ಶಬ್ದ, ಪುರುಷರಲ್ಲಿನ ಪೌರುಷ, ನೆಲದಲ್ಲಿನ ಗಂಧ, ಅಗ್ನಿಯ ತೇಜ, ಭೂತಗಳಲ್ಲಿನ ಜೀವ, ತಪಸ್ವಿಗಳ ತಪಸ್ಸು ನಾನಾಗಿರುವೆನು. ಒಟ್ಟಿನಲ್ಲಿ ಎಲ್ಲಕ್ಕೂ ಕಾರಣವಾದ ಮೂಲಬೀಜವೇ ನಾನು. ಸತ್ತ್ವರಜಸ್ತಮೋಗುಣಗಳು ನನ್ನಿಂದಾದುವೇ. ಅವು ನನ್ನ ಅಧೀನ. ನಾನವಕ್ಕೆ ವಶನಾಗಿಲ್ಲ. ಜಗತ್ತು ಈ ಮೂರುಗುಣಗಳಿಗೆ ಅಧೀನವಾಗಿ ಮೋಹಗೊಂಡಿವೆ. ಈ ನನ್ನ ಮಾಯೆಯನ್ನು ಗೆಲ್ಲುವುದು ಕಷ್ಟ. ನನಗೆ ಶರಣಾದವರಿಗೆ ಮಾತ್ರ ಇದು ಸುಲಭ. (೭,೮-೧೪)

## ಈಶ್ವರ ಭಕ್ತಿ

"ಮಾಯೆಗೆ ವಶರಾದ ಆಸುರೀಸ್ವಭಾವವುಳ್ಳ ಮೂಢರು ನನ್ನನ್ನು ಭಜಿಸಲಾರರು. ಸುಕೃತಿಗಳು ನಾಲ್ಕುವಿಧ. ದುಃಖಿ ಜಿಜ್ಞಾಸು, ಧನಾಭಿಲಾಷೆಯುಳ್ಳವನು ಮತ್ತು ಜ್ಞಾನಿ ಎಂದು. ಈ ನಾಲ್ವರಲ್ಲಿ ಜ್ಞಾನಿಯೇ ಶ್ರೇಷ್ಠ. ಏಕೆಂದರೆ ಅವನಿಗೆ ಐಕ್ಯಾನುಸಂಧಾನರೂಪವಾದ ಭಕ್ತಿಯಿರುತ್ತದೆ. ಆದರಿಂದ ನನಗೆ ಜ್ಞಾನಿಯೇ ಪ್ರಿಯನು. ಅವನಿಗೆ ನಾನು ಪ್ರಿಯನು. (೭,೧೫-೧೭)

## ಭಕ್ತನ ಸ್ಥಿತಿ.

ಭಕ್ತರೆಲ್ಲ ಉದಾರಿಗಳು. ಜ್ಞಾನಿಯಾದ ಭಕ್ತನು ನನ್ನ

ಸ್ವರೂಪವೇ. ಏಕೆಂದರೆ ಅವನು ಅನನ್ಯಭಾವದಿಂದ ನನ್ನನ್ನು ಧ್ಯಾನಿಸುತ್ತಾ ನನ್ನನ್ನೇ ಹೊಂದುವನು. ಮಾನವನು ಅನೇಕ ಜನ್ಮಗಳ ಸುಕೃತದಿಂದ ಜ್ಞಾನಿಯಾಗುತ್ತಾನೆ. ಅನನ್ಯ ಭಕ್ತಿಯಿಂದ ತನ್ನನ್ನು ಭಜಿಸುವ ಜ್ಞಾನಿಯೇ ಮಹಾತ್ಮನು.

(೭,೧೮-೧೯)

ಕೆಲವರು ಸಕಾಮಭಕ್ತಿಯಿಂದ ಇಂದ್ರಾದಿಗಳನ್ನು ಶರಣು ಹೋಗುತ್ತಾರೆ. ಆದರೆ ಅವರು ಎಂಥ ಭಕ್ತಿ ಮಾಡಿದರೂ ಸಹ ಅದನ್ನು ಶ್ರದ್ಧೆಯಿಂದ ಮಾಡಿದ್ದಾದರೆ ನಾನು ಆಯಾ ಸ್ವರೂಪದಲ್ಲಿ ಅವರ ಶ್ರದ್ಧೆಯನ್ನು ದೃಢಪಡಿಸುತ್ತೇನೆ. ಮತ್ತು ಆಯಾ ದೇವತೆಯ ಮೂಲಕ ಅವರ ಇಷ್ಟಾರ್ಥವನ್ನು ನೆರವೇರಿಸುತ್ತೇನೆ. ಆದರೆ ಆ ದೇವತೆಗಳು ಕೊಡುವ ಫಲ ಅತ್ಯಲ್ಪ ಮತ್ತು ಕ್ಷಣಿಕ. ಇಂದ್ರಾದಿ ದೇವತೆಗಳ ಭಕ್ತರು ಇಂದ್ರಾದಿಗಳನ್ನೂ ನನ್ನ ಭಕ್ತರು ನನ್ನನ್ನೂ ಹೊಂದುವರು. ಇಂದ್ರಿಯಾತೀತವೂ ಅನುಪಮವೂ ಆದ ನನ್ನ ಸ್ವರೂಪವನ್ನು ಅವಿವೇಕಿಗಳು ಇಂದ್ರಿಯಗಮ್ಯವೆಂದು ತಿಳಿಯುತ್ತಾರೆ. ನಾನು ಭೂತಭವಿಷ್ಯತ್ ವರ್ತಮಾನ ಕಾಲಗಳಲ್ಲಿನ ಎಲ್ಲ ಪ್ರಾಣಿಗಳನ್ನು ಬಲ್ಲೆ. ಆದರೆ ಅವರಿಗೆ ನಾನು ಯಾರೆಂಬುದು ತಿಳಿಯದು. ಏಕೆಂದರೆ ಅವರು ಹುಟ್ಟಿದ ಕೂಡಲೇ ಸ್ಥೂಲದೇಹದೊಂದಿಗೆ ಮೋಹ ಆವರಿಸಿತು. ಆ ಮೋಹವು ಪಾಪಕ್ಕೆ ಬುನಾದಿಹಾಕಿತು. ಪಾಪವು ನಾಶವಾದಾಗಲೇ ಅವರು ನನ್ನನ್ನು ಭಜಿಸುವರು. ಹುಟ್ಟು ಸಾವುಗಳನ್ನು ಗೆಲ್ಲುವುದಕ್ಕಾಗಿ ನನ್ನನ್ನು ಆಶ್ರಯಿಸಿದವರು ಬ್ರಹ್ಮ

ವನ್ನೂ, ಅಧ್ಯಾತ್ಮವನ್ನೂ ಮತ್ತು ಸರ್ವಕರ್ಮಗಳನ್ನೂ ಅರಿಯುವರು. (೭,೨೦–೨೯)

ಅಧಿಭೂತ, ಅಧಿದೈವ, ಅಧಿಯಜ್ಞ ಯುಕ್ತನಾದವನು ನಾನೆಂದು ತಿಳಿದವನು ಸಮತೆಯನ್ನು ಗಳಿಸುವನು. ಅವನು ಮರಣಕಾಲದಲ್ಲಿಯೂ ನನ್ನನ್ನು ಗುರ್ತಿಸುತ್ತಾನೆ.

೧೧ "ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿಯಜ್ಞ, ಎಂದರೇನು? ಸ್ಥೂಲಶರೀರವನ್ನು ಬಿಟ್ಟು ಲೋಕಾಂತರಕ್ಕೆ ಪ್ರಯಾಣಮಾಡುವ ಕಾಲದಲ್ಲಿ ಯೋಗಿಗಳು ನಿನ್ನನ್ನು ತಿಳಿಯುವ ಬಗೆ ಹೇಗೆ? (೮,೧–೨)

"ಸರ್ವೋತ್ತಮವೂ ಅವಿನಾಶಿಯೂ ಆದುದು ಬ್ರಹ್ಮ. ಈ ದೇಹದಲ್ಲಿ ಭೋಕ್ತೃವಾದ ಜೀವನೇ ಅಧ್ಯಾತ್ಮ. ಸಕಲ ಪ್ರಾಣಿಗಳ ಹುಟ್ಟಿಗೆ ಕಾರಣವಾದುದು ಕರ್ಮ. ನಶಿಸಿ ಹೋಗುತ್ತಿರುವ ಈ ಜಡಪ್ರಪಂಚವೇ ಅಧಿಭೂತ. ಎಲ್ಲ ಶರೀರಗಳಲ್ಲಿ ಅಂತರ್ಯಾಮಿಯಾಗಿರುವ ನನ್ನ ಜೀವಸ್ವರೂಪವೇ ಅಧಿದೈವ. ಈ ದೇಹದಲ್ಲಿ ಯಜ್ಞಾದಿ ಕರ್ಮಗಳಿಂದ ಶುದ್ಧವಾಗುವ ಜೀವಸ್ವರೂಪವೇ ಅಧಿಯಜ್ಞ. (೮,೩–೪)

ಮರಣಕಾಲದಲ್ಲಿ ಭಗವಂತನನ್ನು ಗುರ್ತಿಸುವಬಗೆ:— ಮರಣ ಕಾಲದಲ್ಲಿ ನನ್ನನ್ನು ಸ್ಮರಿಸುವವನು ನನ್ನ ಸ್ವರೂಪವನ್ನು ಹೊಂದುತ್ತಾನೆ. ಮಾನವನು ಅಂತ್ಯಕಾಲದಲ್ಲಿ ಯಾವುದನ್ನು ನೆನೆಯುವನೋ ಅವನು ಅದೇ ಸ್ವರೂಪವನ್ನು ಪಡೆಯುತ್ತಾನೆ.

ಅದರಿಂದ ಯಾವಾಗಲೂ ನನ್ನನ್ನು ನೆನೆ. ನಿನಗೆ ಕರ್ತವ್ಯ ವಾಗಿರುವ ಯುದ್ಧವನ್ನು ಮಾಡು. ಹೀಗೆ ಅಭ್ಯಾಸ ಯೋಗ ದಿಂದ ಮನೋ ಬುದ್ಧಿಗಳನ್ನು ನನಗೆ ಒಪ್ಪಿಸಿ ಧ್ಯಾನಿಸಿದಲ್ಲಿ ನನ್ನನ್ನು ಹೊಂದುವೆ. (೮,೫-೮)

## ಪರಮಪದವಿ ಮತ್ತು ಪುನರ್ಜನ್ಮ

ಇಂದ್ರಿಯ ದ್ವಾರಗಳನ್ನು ಮುಚ್ಚಿ, ಮನಸ್ಸನ್ನು ಹೃದಯ ದಲ್ಲಿಟ್ಟು ಮಸ್ತಕದಲ್ಲಿ ಪ್ರಾಣಧಾರಣಮಾಡಿ ಸಮಾಧಿಸ್ಥ ನಾಗಿ ಓಂಕಾರವನ್ನುಚ್ಚರಿಸುತ್ತಾ ನನ್ನ ಚಿಂತನ ಮಾಡುತ್ತಾ ದೇಹ ಬಿಡುವ ಮನುಷ್ಯನು ಪರಮಗತಿ ಹೊಂದುತ್ತಾನೆ. ಅನನ್ಯಮನಸ್ಕನಾಗಿ ನನ್ನನ್ನು ನೆನೆದರೆ ನನ್ನ ಪದವಿ ಸುಲಭ. ನನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ. ಬ್ರಹ್ಮಲೋಕದ ವರೆಗೆ ಎಲ್ಲ ಲೋಕಗಳಲ್ಲಿರುವವರಿಗೂ ಪುನರ್ಜನ್ಮವುಂಟು. ಇಂದ್ರಿಯಾತೀತವಾದ ಅಕ್ಷಯ ಪರಮಾತ್ಮನೇ ಪರಮಗತಿ. ಅದನ್ನು ಹೊಂದಿದರೆ ಪುನರಾವೃತ್ತಿಯಿಲ್ಲ. ಆ ಪರಮ ಪುರುಷನು ಅನನ್ಯಭಕ್ತಿಗೆ ಲಭ್ಯನು. (೮,೧೨-೧೬)

## ಪುನರಾವೃತ್ತಿ ಹೊಂದುವ ಕಾಲ.

ಸಗುಣ ಬ್ರಹ್ಮೋಪಾಸಕರಾದ ಯೋಗಿಗಳು ಉತ್ತ ರಾಯಣ, ಶುಕ್ಲಪಕ್ಷ, ಹಗಲು, ಅಗ್ನಿಯು ಉರಿಯುವಾಗ ಆಯಾ ಅಭಿಮಾನ ದೇವತೆಗಳಮೂಲಕ ಪ್ರಯಾಣಮಾಡಿ ಸಗುಣ ಬ್ರಹ್ಮವನ್ನು ಹೊಂದುತ್ತಾರೆ. ಕರ್ಮಯೋಗಿಗಳು

ದಕ್ಷಿಣಾಯನ, ಕೃಷ್ಣಪಕ್ಷ, ರಾತ್ರಿ, ಧೂಮಾಭಿಮಾನಿದೇವತೆಗಳ ಮೂಲಕ ಜ್ಯೋತಿರ್ಮಯವಾದ ಚಂದ್ರಲೋಕವನ್ನು ಹೊಂದಿ ಪುನರಾವೃತ್ತಿಹೊಂದುವರು. ಆದರೆ ಇದಕ್ಕೆ ಮೋಹಗೊಳ್ಳ ಬೇಕಾಗಿಲ್ಲ. ಯೋಗಯುಕ್ತನಾದವನು ಯಾವಾಗಬೇಕಾದರೂ ಪರಮಪದವಿ ಪಡೆದು ಮುಕ್ತನಾಗುವನು. (೮,೨೪-೨೭)

## ಭಕ್ತಿಯ ಹಿರಿಮೆ

ಅನನ್ಯ ಭಕ್ತಿಯೇ ಸರ್ವಶ್ರೇಷ್ಠವಾದುದು. ಇದು ಅತ್ಯಂತ ರಹಸ್ಯವಾದುದು. 'ರಾಜಗುಹ್ಯ'ವೆಂದರೆ ಇದೇ. ವಿದ್ಯೆಗಳಲ್ಲಿ ಇದು ರಾಜ ಮತ್ತು ಪವಿತ್ರತಮ. ಇದಕ್ಕೆ ನಂಬಿಕೆ (ಶ್ರದ್ಧೆ)ಯೇ ತಳಹದಿ. ಶ್ರದ್ಧೆಯಿಲ್ಲದಿದ್ದರೆ ಹೆಜ್ಜೆಹೆಜ್ಜೆಗೂ ದಾರಿ ತಪ್ಪಬೇಕಾಗುತ್ತದೆ. (೯,೧-೩)

ನನ್ನ ಆಧಾರದಮೇಲೆ ಜಗತ್ತು ನಿಂತಿದೆ. ನಾನು ಎಲ್ಲೆಡೆಯೂ ತುಂಬಿರುವೆನು. ಎಲ್ಲವನ್ನು ಪಾಲಿಸಿದರೂ ನಾನು ಅವುಗಳಲ್ಲಿಲ್ಲ. ಇದು ನನ್ನ ಯೋಗಬಲದ ಮಹಿಮೆ. ಕಲ್ಪದ ಕಡೆಯಲ್ಲಿ ಎಲ್ಲವೂ ನನ್ನಲ್ಲಿ ವಿಲೀನವಾಗುವುದು. ಕಲ್ಪದ ಆದಿ ಯಲ್ಲಿ ಎಲ್ಲವನ್ನು ಮತ್ತೆ ಸೃಜಿಸುವೆನು. ನನಗೆ ಕರ್ತೃತ್ವದ ಅಭಿಮಾನವಿಲ್ಲ. ಉದಾಶೀನನಂತಿರುವೆನು. ನನ್ನ ನೇತೃತ್ವ ದಲ್ಲಿ ಪ್ರಕೃತಿ ಚರಾಚರಾತ್ಮಕವಾದ ಪ್ರಪಂಚವನ್ನು ಸೃಷ್ಟಿ ಸುತ್ತದೆ. (೯,೪-೧೦)

ಮೋಹಪರವಶರಾದವರು ನನ್ನನ್ನು ತಿಳಿಯಲಾರರು. ದೈವೀಸಂಪತ್ತುಳ್ಳವರು ಪ್ರಪಂಚಕ್ಕೆ ಮೂಲಕಾರಣವಾದ

ನನ್ನನ್ನರಿತು ಭಜಿಸುತ್ತಾರೆ. ದೃಢವ್ರತರಾಗಿ ನನ್ನನ್ನು ಕೀರ್ತಿಸುತ್ತಾರೆ. ಭಕ್ತಿಯಿಂದ ನಮಸ್ಕರಿಸುತ್ತಾರೆ. ಧ್ಯಾನಮಗ್ನರಾಗುತ್ತಾರೆ. ಕೆಲವರು ಅಭೇದರೂಪನೆಂದೂ, ಕೆಲವರು ಭೇದರೂಪನೆಂದೂ ಧ್ಯಾನಿಸುವರು. (೯,೧೧–೧೫)

ಕ್ರತು, ಯಜ್ಞ, ಸ್ವಾಧ್ಯಾಯ, ಓಷಧಿ (ಸಮಿತ್ತು) ಮಂತ್ರ ಆಹುತಿ, ಅಗ್ನಿ ಮತ್ತು ಹವನ ದ್ರವ್ಯಗಳೆಲ್ಲ ನಾನೆ. ಜಗತ್ತಿಗೆ ತಾಯಿ, ತಂದೆ, ರಕ್ಷಕ ಎಲ್ಲವೂ ನಾನೆ. ಗತಿ, ಪೋಷಕ, ಪ್ರಭು, ಸಾಕ್ಷಿ, ನಿವಾಸಗಳು ನಾನು. ಮೃತ್ಯು ಅಮರತ್ವಾದಿಗಳು ನಾನು. ಹೀಗಿದ್ದರೂ ಕೆಲವರು ಸಕಾಮದಿಂದ ಯಜ್ಞಾದಿಗಳನ್ನು ಮಾಡಿ ಸ್ವರ್ಗಕ್ಕೆ ಹೋಗಿ ಮತ್ತೆ ಮರ್ತ್ಯಕ್ಕೆ ಇಳಿಯುವರು.

(೯,೧೬–೨೧)

ಅನನ್ಯ ಭಾವದಿಂದ ನನ್ನ ಚಿಂತನೆ ಮಾಡುವವರ ಯೋಗಕ್ಷೇಮ ನನ್ನದು. ಬೇರೆ ದೇವತೆಗಳನ್ನು ಪೂಜಿಸಿದರು ನನ್ನನ್ನೇ ಭಜಿಸುವರೆಂದು ಎಣಿಸುತ್ತೇನೆ. ಎಲ್ಲ ಯಜ್ಞಗಳ ಭೋಕ್ತೃವೂ ಫಲದಾತೃವೂ ನಾನೆ. ಸಕಾಮರಿಗೆ ಇದು ತಿಳಿವುದಿಲ್ಲ. ಆದ್ದರಿಂದ ಅವರಿಗೆ ಮೋಕ್ಷ ಲಭಿಸದು. ಪತ್ರ, ಪುಷ್ಪ, ಫಲ, ಕಡೆಗೆ ಒಂದಿಷ್ಟು ನೀರು ಹೀಗೆ ಯಾವುದನ್ನಾದರೂ ಭಕ್ತಿಯಿಂದ ಅರ್ಪಿಸಿದರೆ ಅದೇ ನನಗೆ ಪ್ರಿಯ. (೯,೨೨–೨೬)

ಅರ್ಜುನ, ನೀನು ಇಂದ್ರಿಯಗಳ ಮೂಲಕ ಸ್ವೀಕರಿಸುವುದೆಲ್ಲವನ್ನೂ ನನಗೆ ಅರ್ಪಿಸು ನನಗೆ ಅರ್ಪಿತವಾದುದು ನನ್ನ

ಪ್ರಸಾದವೆನಿಸುವುದು. ಅಂಥ ಪ್ರಸಾದವನ್ನು ನೀನು ಅನು ಭವಿಸು. ಪ್ರಸಾದವನ್ನು ಸೇವಿಸುವವನಿಗೆ ಪಾಪಪುಣ್ಯಗಳ ಲೇಪವಿಲ್ಲ. ನನಗೆ ಇವರು ಪ್ರಿಯರು, ಇವರು ಅಪ್ರಿಯರು ಎಂಬ ಪಕ್ಷಪಾತವಿಲ್ಲ. ನನ್ನ ಭಕ್ತರಲ್ಲಿ ನಾನಿರುವೆನು. ದುರಾ ಚಾರಿಯಾದರೂ ಅನನ್ಯ ಭಕ್ತಿಯಿಂದ ನನ್ನನ್ನು ಭಜಿಸಿದರೆ ಅವನು ಸದಾಚಾರಿಯಾಗುವನು. ಧರ್ಮಾತ್ಮನಾಗುವನು. ನನ್ನ ಭಕ್ತರಿಗೆ ನಾಶವಿಲ್ಲ. ಎಂಥ ಪಾಪಿಯಾದರೂ ನನ್ನ ಭಕ್ತ ನಾದರೆ ಸಾಕು ಅವನಿಗೆ ಸದ್ಗತಿಯುಂಟು. ಭಕ್ತರಲ್ಲಿ ಲಿಂಗ, ವಯಸ್ಸು, ವರ್ಗಭೇದಗಳಿಗೆ ಎಡೆಯಿಲ್ಲ. ಅಂದಮೇಲೆ ಸತ್ಪುರು ಷರ ಬಗ್ಗೆ ಹೇಳುವುದೇನು? ಒಟ್ಟಿನಲ್ಲಿ ನನ್ನಲ್ಲಿ ಮನಸ್ಸನ್ನಿಡು. ನನ್ನ ಭಕ್ತನಾಗು, ನನ್ನನ್ನು ಭಜಿಸು. ನನಗೆ ಶರಣಾಗು. ನನ್ನಲ್ಲಿ ಪರಾಯಣನಾಗು, ನನ್ನಲ್ಲಿಯೇ ಐಕ್ಯಾನುಸಂಧಾನ ಮಾಡು, ನನ್ನನ್ನೇ ಹೊಂದುವೆ. (೯,೨೭–೩೪)

## ಭಗವಂತನ ವಿಭೂತಿಗಳು.

"ಅರ್ಜುನ, ಅತ್ಯಂತ ಪ್ರಿಯನಾದವನಿಗೆ ಮತ್ತೊಂದು ಮಹತ್ವವಾದ ರಹಸ್ಯವನ್ನು ಹೇಳುವೆನು ಕೇಳು. ಅವಿನಾಶಿ ಯಾದ ನನ್ನ ಅಧೀನದಲ್ಲಿರುವ ಯೋಗಮಾಯೆಯಿಂದ ಆದಿತ್ಯಾದಿ ವಿಭೂತಿ ರೂಪದಿಂದ ಅವತರಿಸಿರುವ ನನ್ನ ಉತ್ಪತ್ತಿ ಯನ್ನು ಯಾರೂ ಅರಿಯರು ವಿವೇಕ, ಆತ್ಮಜ್ಞಾನ, ಮೋಹ ವಿಲ್ಲದಿರುವುದು, ಕ್ಷಮೆ, ಸತ್ಯ, ಬಾಹ್ಯ ಮತ್ತು ಅಂತರ ಇಂದ್ರಿಯನಿಗ್ರಹ, ಸುಖ, ದುಃಖ, ಉತ್ಪತ್ತಿ, ಲಯ, ಭಯ,

14

ನಿರ್ಭಯ, ಅಹಿಂಸೆ, ರಾಗ ದ್ವೇಷವಿಲ್ಲದಿರುವಿಕೆ, ದೊರೆತುದರಲ್ಲಿ ತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ, ನಾನಾ ವಿಧವಾದ ಭಾವನೆಗಳೆಲ್ಲವೂ ಪ್ರಾಣಿಗಳಿಗುಂಟಾಗುವುದು ನನ್ನಿಂದಲೇ. ಋಷಿಗಳೂ, ಮನುಗಳೂ ನನ್ನ ತೇಜೋವಿಭೂತಿಗಳು; ಈ ನನ್ನ ವಿಭೂತಿಯನ್ನು ಅಚಿಂತ್ಯೈಶ್ವರ್ಯವನ್ನು ಸರಿಯಾಗಿ ತಿಳಿದವನು ಸಮ್ಯಕ್ ದರ್ಶನ ಯೋಗಯುಕ್ತನಾಗುವನು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ನಾನೇ ಕಾರಣನೆಂಬುದನ್ನು ನನ್ನ ಭಕ್ತರು ಅರಿಯಬಲ್ಲರು. ಅಂಥವರಿಗೆ ನನ್ನನ್ನು ಹೊಂದುವ ಜ್ಞಾನವೆಂಬ ಉಪಾಯವನ್ನು ಕೊಡುವೆನು. ಅವರ ಅಜ್ಞಾನವನ್ನು ಹೋಗಲಾಡಿಸುವೆನು. ಅದರಿಂದ ಅವರಿಗೆ ನನ್ನನ್ನು ಹೊಂದಲು ಅನುಕೂಲವಾಗುವುದು." (೧೦,೧–೧೧)

೧೨ "ಹಾಗಾದರೆ ಪರಮಾತ್ಮ, ನೀನು ಪರಬ್ರಹ್ಮಸ್ವರೂಪ, ಪರಂಧಾಮ, ಪರಮಪವಿತ್ರನು. ನಾರದಾದಿ ಮಹರ್ಷಿಗಳು ನಿನ್ನ ದಿವ್ಯ ಸ್ವರೂಪವನ್ನು ಬಗೆಬಗೆಯಾಗಿ ಹೇಳುವರು. ನಿನ್ನ ಆ ಭವ್ಯವಾದ ದಿವ್ಯಸ್ವರೂಪಗಳನ್ನು ವಿಸ್ತಾರವಾಗಿ ಹೇಳುವೆಯಾ?" (೧೦,೧೨–೧೮)

"ಒಳ್ಳೆಯದು ಅರ್ಜುನ, ನನ್ನ ಮುಖ್ಯ ವಿಭೂತಿಗಳನ್ನು ಹೇಳುವೆನು ಕೇಳು. ಎಲ್ಲ ಪ್ರಾಣಿಗಳ ಹೃದಯಗಳಲ್ಲಿರುವ ಆತ್ಮನು ನಾನು. ಎಲ್ಲ ಭೂತಗಳ ಆದಿ ಮಧ್ಯ ಅಂತ್ಯಗಳು ನಾನು. ಆದಿತ್ಯರಲ್ಲಿ ವಿಷ್ಣು, ಬೆಳಕುಗಳಲ್ಲಿ ಸೂರ್ಯ, ಗಾಳಿಗಳಲ್ಲಿ ಮರೀಚಿ, ತಾರೆಗಳಲ್ಲಿ ಚಂದ್ರ, ವೇದಗಳಲ್ಲಿ ಸಾಮ,

ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳಲ್ಲಿ ಮನಸ್ಸು, ಪ್ರಾಣಿಗಳಲ್ಲಿ ಚೈತನ್ಯ, ರುದ್ರರಲ್ಲಿ ಶಂಕರ, ಯಕ್ಷರಲ್ಲಿ ಕುಬೇರ, ವಸುಗಳಲ್ಲಿ ಅಗ್ನಿ, ಪರ್ವತಗಳಲ್ಲಿ ಮೇರು, ಪುರೋಹಿತರಲ್ಲಿ ಬೃಹಸ್ಪತಿ, ಸೇನಾನಿಗಳಲ್ಲಿ ಕುಮಾರಸ್ವಾಮಿ, ಜಲಾಶಯಗಳಲ್ಲಿ ಸಾಗರ, ಮಹರ್ಷಿಗಳಲ್ಲಿ ಭೃಗು, ವಾಣಿಗಳಲ್ಲಿ ಏಕಾಕ್ಷರವಾದ ಓಂಕಾರ, ಯಜ್ಞಗಳಲ್ಲಿ ಜಪಯಜ್ಞವೇ ನಾನು. (೧೦,೧೯—೨೫)

ಮರಗಳಲ್ಲಿ ಅಶ್ವತ್ಥ, ದೇವರ್ಷಿಗಳಲ್ಲಿ ನಾಗದ, ಸಿದ್ಧರಲ್ಲಿ ಕಪಿಲ, ಮಾನವರಲ್ಲಿ ರಾಜ, ಸರ್ಪಗಳಲ್ಲಿ ವಾಸುಕಿ, ಗೋವುಗಳಲ್ಲಿ ಕಾಮಧೇನು, ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು, ಆನೆಗಳಲ್ಲಿ ಐರಾವತ, ದೈತ್ಯರಲ್ಲಿ ಪ್ರಹ್ಲಾದ, ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆ, ಅಕ್ಷರಮಾಲೆಯಲ್ಲಿ ಅಕಾರವೂ ಸರ್ವಸಂಹಾರಕ ಮೃತ್ಯುವೂ ನಾನಾಗಿರುವೆನು. ಯಾದವರಲ್ಲಿ ಶ್ರೀಕೃಷ್ಣ, ಪಾಂಡವರಲ್ಲಿ ಅರ್ಜುನನೂ ನಾನೇ; ಒಟ್ಟಿನಲ್ಲಿ ಸಮಸ್ತ ಪ್ರಾಣಿಗಳ ಕಾರಣವೇ ನಾನು. ನನಗೆ ಭಿನ್ನವಾದುದು ಮತ್ತೊಂದಿಲ್ಲ. ನನ್ನ ದಿವ್ಯ ವಿಭೂತಿಗಳಿಗೆ ಕೊನೆಯಿಲ್ಲ. ಸಂಕ್ಷೇಪವಾಗಿ ಹೇಳಿರುವೆನು. ಮುಖ್ಯವಾಗಿ ಯಾವುದು ಯಾವುದು ಸಾರವುಳ್ಳದ್ದೂ, ಐಶ್ವರ್ಯವುಳ್ಳದ್ದೂ, ಪ್ರಭಾವಯುಕ್ತವಾದುದೂ ಆಗಿದೆಯೋ ಅದೆಲ್ಲ ನನ್ನ ಮಹಿಮೆಯಿಂದ ಹುಟ್ಟಿದುದು. ಬಹಳ ಹೇಳುವುದೇನು? ನನ್ನ ಒಂದೇ ಅಂಶದಿಂದ ಈ ವಿಶ್ವವೆಲ್ಲವನ್ನೂ ಧರಿಸಿರುವೆನು." (೧೦,೨೬-೪೨)

## ವಿಶ್ವರೂಪ ಪ್ರದರ್ಶನ.

೧೩ "ಭಗವನ್, ನಿನ್ನ ವಿಭೂತಿಗಳ ವರ್ಣನೆಯಿಂದ ನನ್ನ

ಮೋಹವು ಎಷ್ಟೋ ಕಡಮೆಯಾಯಿತು. ಆದರೆ ಆ ನಿನ್ನ ಈಶ್ವರೀ ಸ್ವರೂಪವನ್ನು ನೋಡಲು ಆಸೆಯಾಗಿದೆ. ಕೃಪೆಮಾಡಿ ಆ ಅವ್ಯಯವಾದ ಸ್ವರೂಪವನ್ನು ತೋರಿಸು?" (೧೧,೧–೪)

"ತಥಾಸ್ತು! ಅರ್ಜುನ, ನಾನಾವರ್ಣಗಳಿಂದ ಅನೇಕ ಆಕಾರಗಳುಳ್ಳ ದೇದೀಪ್ಯಮಾನವಾದ ನನ್ನ ಸ್ವರೂಪವನ್ನು ನೋಡು. ಅದರಲ್ಲಿ ದ್ವಾದಶಾದಿತ್ಯರೂ, ಅಶ್ವಿನೀದೇವತೆಗಳೂ, ಮರುದ್ಗಣಗಳೂ, ಮತ್ತು ಸಚರಾಚರವಾದ ಈ ವಿಶ್ವವೆಲ್ಲವನ್ನೂ ತೋರಿಸುವೆನು. ಆದರೆ ಚರ್ಮ ಚಕ್ಷುಸ್ಸಿನಿಂದ ವಿಭೂತಿ ಯುಕ್ತವಾದ ನನ್ನ ಸ್ವರೂಪವನ್ನು ನೀನು ನೋಡಲಾರೆ. ಆದ್ದರಿಂದ ನಿನಗೆ ದಿವ್ಯ ದೃಷ್ಟಿಯನ್ನು ಕೊಡುವೆನು. ಆಗ ನೀನು ನನ್ನ ಭವ್ಯರೂಪವನ್ನು ನೋಡಬಲ್ಲೆ." (೧೧,೫–೮)

ಹೀಗೆಂದು ಭಗವಂತನು ವಿಶ್ವತೋಮುಖ, ವಿಶ್ವತಶ್ಚಕ್ಷು, ವಿಶ್ವತೋಪಾದ ಹಸ್ತಗಳುಳ್ಳ ತನ್ನ ದಿವ್ಯಸ್ವರೂಪವನ್ನು ತೋರಿಸಿದನು. ಅನೇಕ ದಿವ್ಯಾಭರಣಗಳು, ಆಯುಧಗಳು, ಮತ್ತು ದಿವ್ಯ ಮಾಲೆಗಳಿಂದ ಅದು ಅಲಂಕೃತವಾಗಿತ್ತು. ದೇದೀಪ್ಯಮಾನವಾದ ಈ ಭಗವಂತನ ಶರೀರದಲ್ಲಿ ಸಾವಿರ ತೇಜಸ್ಸುಗಳ ಪ್ರಕಾಶ ಹೊರ ಹೊಮ್ಮಿತು. ಆ ದಿವ್ಯದೇಹದಲ್ಲಿ ಅರ್ಜುನನು ಇಡೀ ವಿಶ್ವವನ್ನೇ ಕಂಡು ಮುಗ್ಧನಾದನು; ಮತ್ತು ಅಂಜಲಿಬದ್ಧನಾಗಿ ಬೇಡ ತೊಡಗಿದನು. (೧೧,೯–೧೪)

೧೪ "ದೇವ, ನಿನ್ನ ದೇಹದಲ್ಲಿ ದೇವತೆಗಳನ್ನೂ, ಎಲ್ಲ ಪ್ರಾಣಿ ಸಮುದಾಯವನ್ನೂ ಕಾಣುತ್ತಿರುವೆನು! ಈ ಈಶ,

ಬ್ರಹ್ಮರು, ಋಷಿಗಳು, ದಿವ್ಯ ಸರ್ಪಗಳು ಮುಂತಾದುವೆಲ್ಲ ನಿನ್ನ ಶರೀರದಲ್ಲಿ ಕಾಣುತ್ತಿವೆ! ನಿನಗೆ ಮೊದಲಿಲ್ಲ, ಮಧ್ಯವಿಲ್ಲ, ಕಡೆಯಿಲ್ಲ, ನೆಲಮುಗಿಲುಗಳ ನಡುವಣ ಬ್ರಹ್ಮಾಂಡವನ್ನೆಲ್ಲ ನೀನೆ ತುಂಬಿರುವೆ. ನಿನ್ನ ಈ ಉಗ್ರಸ್ವರೂಪವು ಎಷ್ಟು ಭಯಂಕರವಾಗಿದೆ! ದೇವತೆಗಳೆಲ್ಲ ನಿನಗೆ ಶರಣಾಗುತ್ತಿದ್ದಾರೆ! ಕೆಲವರು ಹೆದರಿ ಅಂಜಲಿ ಬದ್ಧರಾಗಿದ್ದಾರೆ! ಋಷಿವೃಂದವು ಸ್ತುತಿಸುತ್ತಿದೆ. ರುದ್ರರು ವಸುಗಳು ಮುಂತಾದವರು ಆಶ್ಚರ್ಯಚಕಿತರಾಗಿದ್ದಾರೆ. (೧೧,೧೫-೨೫)

ಅಗೊ! ಧೃತರಾಷ್ಟ್ರನ ಮಕ್ಕಳು! ಭೀಷ್ಮ, ದ್ರೋಣ, ಕರ್ಣ ಮೊದಲಾದ ಸೈನ್ಯಗಳೊಂದಿಗೆ ನಿನ್ನ ಕರಾಳವಾದ ಮುಖದಲ್ಲಿ ನುಗ್ಗುತ್ತಿದ್ದಾರೆ! ವೇಗವಾದ ನದೀಜಲವು ಸಮುದ್ರಕ್ಕೆ ನುಗ್ಗುವಂತೆ ಈ ರಾಜರು ನಿನ್ನನ್ನು ಪ್ರವೇಶಿಸುತ್ತಿದ್ದಾರೆ! ಅಗ್ನಿಯಲ್ಲಿ ಪತಂಗಗಳು ಬೀಳುವಂತೆ ನಿನ್ನಲ್ಲಿ ಧುಮುಕಿನಾಶನಾಗುತ್ತಲಿದ್ದಾರೆ. ದೇವೇಶ, ಪ್ರಸನ್ನನಾಗು. ನಿನಗೆ ವಂದಿಸುವೆನು. ಉಗ್ರವಾದ ನಿನ್ನೀಸ್ವರೂಪವನ್ನು ತಿಳಿಸು." (೧೧,೨೬-೩೧)

"ಲೋಕನಾಶಕನಾದ ಕಾಲನು ನಾನು. ನೀನು ನೋಡುತ್ತಿರುವ ಯೋಧರಲ್ಲಿ ಯಾರು ಯುದ್ಧಮಾಡಬೊಪ್ಪದಿದ್ದರೂ ಅವರು ಉಳಿಯಲಾರರು. ಅವರ ನಾಶಕ್ಕಾಗಿಯೇ ನಾನು ಪ್ರವೃತ್ತನಾಗಿರುವೆನು. ಆದ್ದರಿಂದ ಎದ್ದೇಳು. ಕೀರ್ತಿಯನ್ನು ಪಡೆ. ಶತ್ರುಗಳನ್ನು ವಧಿಸಿ ರಾಜ್ಯವನ್ನು ಭೋಗಿಸು. ನನ್ನಿಂದ ಇವರು ಮೊದಲೇ ಹತರಾಗಿದ್ದಾರೆ. ನಿಮಿತ್ತಮಾತ್ರಕ್ಕೆ ನೀನು

ಯುದ್ಧಮಾಡು. ಭೀಷ್ಮದ್ರೋಣಾದಿಗಳನ್ನು ವಧಿಸಲು ವ್ಯಥೆ ಪಡಬೇಡ. (೧೧,೩೨-೩೪)

೧೫ "ಎಲೈ ಹೃಷೀಕೇಶ, ಇದಕ್ಕಾಗಿಯೇ ಅಲ್ಲವೇ ಜಗತ್ತು ನಿನ್ನನ್ನು ಸ್ತುತಿಸಿ ನಲಿಯುವುದು! ನಿನ್ನಲ್ಲಿ ಭಕ್ತಿ ಹುಟ್ಟುವುದು ಉಚಿತವೇ. ಅಸುರರು ಇಲ್ಲಿಂದಲ್ಲಿಗೆ ಓಡಾಡುತ್ತಿದ್ದಾರೆ. ಸತ್, ಅಸತ್. ಇವೆರಡನ್ನೂ ಮೀರಿದವನು ನೀನೆ. ನೀನೆ ವಿಶ್ವಕ್ಕೆ ಗತಿ, ಪುರಾಣಪುರುಷ, ಪರಮಪುರುಷ, ನಿನಗೆ ನಮಸ್ಕಾರ. ನಿನ್ನ ಸ್ವರೂಪವನ್ನು ಅರಿಯದೆ ನಾನು ಸಲಿಗೆ ಯಿಂದ ವರ್ತಿಸಿದ ಅಪರಾಧವನ್ನು ಮನ್ನಿಸು, ನಿನ್ನ ವಿಶ್ವರೂಪ ವನ್ನು ಕಂಡು ರೋಮಾಂಚವಾಗಿದೆ. ಭಯದಿಂದ ಮನಸ್ಸು ವ್ಯಾಕುಲವಾಗಿದೆ. ಪ್ರಸನ್ನನಾಗು. ನಿನ್ನ ಮೊದಲಿನ ದಿವ್ಯ ಮಂಗಲ ಸ್ವರೂಪವನ್ನು ದಯೆಕರಿಸು." (೧೧,೩೬-೪೬)

"ಅರ್ಜುನ, ತೇಜೋಮಯವೂ ವಿಶ್ವವ್ಯಾಪಿಯೂ ಆದ ನನ್ನ ಸ್ವರೂಪವನ್ನು ಮತ್ತಾರಿಗೂ ತೋರಿಸಿಲ್ಲ. ಈ ಸ್ವರೂಪ ವನ್ನು ನೋಡಿ ಹೆದರಬೇಡ. ಮೋಹಪರವಶನಾಗಬೇಡ. ಶಾಂತನಾಗು. ನಿನಗೆ ಪರಿಚಿತವಾದ ಸ್ವರೂಪವನ್ನು ನೋಡು."

(೧೧,೪೭-೪೯)

೧೬ "ಭಗವನ್, ನಿನ್ನ ಸೌಮ್ಯ ಮಾನುಷ ಸ್ವರೂಪವನ್ನು ನೋಡಿ ಮನಸ್ಸು ಶಾಂತವಾಯಿತು. ಸ್ಥಿಮಿತಕ್ಕೆ ಬಂತು."

(೧೧,೫೧)

"ಪಾರ್ಥ, ನೀನು ಕಂಡ ಸ್ವರೂಪವು ಮತ್ತಾರಿಗೂ ದೊರೆಯಲಾರದು. ಈ ದಿವ್ಯ ರೂಪವು ವೇದ, ಯಜ್ಞ, ದಾನ ತಪಸ್ಸುಗಳಿಂದ ಲಭಿಸದು. ಅನನ್ಯ ಭಕ್ತಿಯಿಂದ ಮಾತ್ರ ಲಭ್ಯವಾಗುತ್ತದೆ. ಆದ್ದರಿಂದ ಎಲ್ಲ ಕರ್ಮಫಲಗಳನ್ನು ನನಗೊಪ್ಪಿಸಿ, ನಿಷ್ಕಾಮದಿಂದ ದ್ವೇಷರಹಿತನಾಗಿ ಕರ್ತವ್ಯವೆಸಗು. ನನ್ನನ್ನು ಹೊಂದುವೆ." (೧೧,೫೩–೫೫)

## ಗೀತೆಯ ತಿರುಳು

೧೭ "ಸ್ವಾಮಿ, ನಿರಂತರವೂ ನಿನ್ನನ್ನು ಧ್ಯಾನಿಸುತ್ತಾ ನಿರಾಕಾರವೂ ಅವಿನಾಶಿಯೂ ಆದ ನಿನ್ನ ವಿಶ್ವರೂಪವನ್ನು ಅರಿತು ಭಜಿಸುವ ಉಪಾಸಕರಲ್ಲಿ ಯಾರು ಶ್ರೇಷ್ಠ? (೧೨,೧)

"ಅರ್ಜುನ, ನಿರಂತರವೂ ನನ್ನ ಸಗುಣಮೂರ್ತಿಯನ್ನು ಅತಿಶಯ ಭಕ್ತಿಯಿಂದ ಉಪಾಸಿಸುವ ಯೋಗಿಯೇ ಶ್ರೇಷ್ಠನು. ಮತ್ತು ಜಿತೇಂದ್ರಿಯನೂ ಸಮಬುದ್ಧಿಯುಳ್ಳವನೂ, ಸರ್ವಭೂತ ಹಿತನೂ ಆದ ಸಾಧಕನು ಅವ್ಯಕ್ತವೂ ಅನಿರ್ದೇಶ್ಯವೂ ಸರ್ವ ವ್ಯಾಪಕವೂ ಆದ ನನ್ನ ನಿರ್ಗುಣಸ್ವರೂಪವನ್ನು ಉಪಾಸಿದರೂ ಸಹ ನಿರ್ಗುಣವಾದ ನನ್ನನ್ನೇ ಹೊಂದುವನು. ಆದರೆ ಅವ್ಯಕ್ತವಾದ ವಸ್ತುವಿನಲ್ಲಿ ಮನಸ್ಸನ್ನು ನಿಲ್ಲಿಸುವುದು ಕಷ್ಟ. ಆದ್ದರಿಂದ ಎಲ್ಲ ಕರ್ಮಗಳನ್ನೂ ನನಗೆ ಸಮರ್ಪಿಸಿ, ನಾನೇ ಪರಮ ಪುರುಷಾರ್ಥವೆಂದು ಭಾವಿಸಿ, ಅನನ್ಯ ಭಾವದಿಂದ ಧ್ಯಾನಮಾಡಿದರೆ ಅವನನ್ನು ಭವಪ್ರಪಂಚದಿಂದ ಬೇಗಪಾರುಮಾಡುವೆನು. ನನ್ನಲ್ಲಿ

ಮನಸ್ಸನ್ನಿಡು. ನನ್ನಲ್ಲಿ ಬುದ್ಧಿಯನ್ನು ಯೋಜಿಸು. ಆಗ ನನ್ನಲ್ಲಿಯೇ ವಾಸಮಾಡುವೆ. (೧೨,೨–೮)

ಒಮ್ಮೆಯೇ ನನ್ನಲ್ಲಿ ಮನಸ್ಸನ್ನು ನಿಲ್ಲಿಸುವುದು ಅಸಾಧ್ಯವಾದರೆ ಮತ್ತೆ ಮತ್ತೆ ಅಭ್ಯಾಸಮಾಡಿ ಸಾಧಿಸು. ಹಾಗೆ ಅಭ್ಯಾಸ ಮಾಡುವುದೂ ಅಸಾಧ್ಯವಾದರೆ ನನ್ನ ಪರವಾದ ಸತ್ಕರ್ಮಗಳನ್ನು ಮಾಡು. ಸತ್ಕರ್ಮದಿಂದ ಚಿತ್ತಶುದ್ಧವಾಗಿ ಸಿದ್ಧಿಪಡೆಯುವೆ. ಅದೂ ಸಾಧ್ಯವಾಗದಿದ್ದರೆ ನನಗೆ ಶರಣಾಗು. ಎಲ್ಲ ಕರ್ಮಗಳ ಫಲವನ್ನೂ ನನಗೆ ಒಪ್ಪಿಸಿ ಬಿಡು. ಸರಿಯಾದ ತಿಳಿವಳಿಕೆಯಿಲ್ಲದೆ ಮಾಡುವ ಅಭ್ಯಾಸಕ್ಕಿಂತ ಶಾಸ್ತ್ರಾಭ್ಯಾಸದಿಂದ ಬರುವ ಅರಿವು ಶ್ರೇಷ್ಠ. ಅದಕ್ಕಿಂತ ಧ್ಯಾನ ಮಾರ್ಗವು ಶ್ರೇಷ್ಠ ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಹಿರಿದು. ಕರ್ಮಫಲ ತ್ಯಾಗದಿಂದ ಶಾಂತಿಲಭಿಸುವುದು. (೧೨,೯–೧೨)

ಎಲ್ಲ ಪ್ರಾಣಿಗಳ ಹಿತಚಿಂತಕನೂ, ಕರುಣಾಳುವೂ, ಸುಖದುಃಖಗಳಲ್ಲಿ ಸಮಬುದ್ಧಿಯುಳ್ಳವನೂ, ಕ್ಷಮಾವಂತನೂ, ಯಾವಾಗಲೂ ಸಂತುಷ್ಟನೂ, ಜಿತೇಂದ್ರಿಯನೂ, ಯೋಗಯುಕ್ತನೂ, ದೃಢಸಂಕಲ್ಪವುಳ್ಳವನೂ ಮತ್ತು ಮನೋಬುದ್ಧಿಗಳನ್ನು ನನಗೆ ಸಮರ್ಪಿಸಿರುವವನೂ ನನಗೆ ಪ್ರಿಯಭಕ್ತನು. (೧೨,೧೩–೧೪)

ಜನರಿಗೆ ಉದ್ವೇಗವನ್ನುಂಟುಮಾಡದೆ, ಅವರಿಂದ ತಾನೂ ಉದ್ವಿಗ್ನನಾಗದೆ, ಹರ್ಷ, ಅಸಹನೆ, ಭಯ, ಕ್ರೋಧ, ವ್ಯಾಕುಲತೆ

ಗಳಿಗೆ ವಶವಾಗದವನು ನನಗೆ ಇಷ್ಟನು. ವಿಷಯಾಸಕ್ತಿಯಿಲ್ಲದವನೂ, ಸದಾಚಾರಿಯೂ, ದಕ್ಷನೂ, ಚಿಂತಾರಹಿತನೂ, ಉದಾಶೀನನೂ ಆಗಿ ಸಂಕಲ್ಪ ವಿಕಲ್ಪಗಳಿಲ್ಲದವನೇ ನನ್ನ ಭಕ್ತನು. ಇಷ್ಟವಸ್ತುಲಾಭದಿಂದ ಹರ್ಷಿಸದೆ, ಅನಿಷ್ಟವಾದರೆ ದ್ವೇಷಿಸದೆ, ಶುಭಾಶುಭಗಳೆರಡನ್ನೂ ತ್ಯಜಿಸಿದವನು ನಿಜವಾದ ಭಕ್ತ. ಶತ್ರುಮಿತ್ರರಲ್ಲಿ ಸಮಭಾವನೆ, ಹಾಗೆಯೆ ಮಾನಾಪಮಾನಗಳಲ್ಲಿ, ಶೀತ-ಉಷ್ಣ, ಸುಖದುಃಖ, ನಿಂದೆ-ಸ್ತುತಿಗಳಲ್ಲಿ ಸಮತೆಯನ್ನು ಸಾಧಿಸಿ ಯಥಾಲಾಭಸಂತುಷ್ಟನಾಗಿ ಸ್ಥಿರಭಕ್ತಿ ಮಾಡುವವನು ನನಗೆ ಇಷ್ಟನು. (೧೨,೧೫-೧೯)

ಹೀಗೆ ಪವಿತ್ರವೂ ಅಮೃತಮಯವೂ ಆದ ಈ ಧರ್ಮಾಮೃತ (ಜ್ಞಾನ)ವನ್ನು ಪಾನಮಾಡಿ (ಸೇವಿಸಿ), ನನ್ನನ್ನು ಶ್ರದ್ಧೆಯಿಂದ ಉಪಾಸನೆ ಮಾಡುವವನು. ನನಗೆ ಅತ್ಯಂತ ಪ್ರಿಯ ಭಕ್ತನು.” (೧೨,೨೦)



## ಜ್ಞಾನಯೋಗ

೧೮ "ಎಲೈ ಕೇಶವ, ಪ್ರಕೃತಿ, ಪುರುಷ, ಕ್ಷೇತ್ರ, ಕ್ಷೇತ್ರಜ್ಞ ಜ್ಞಾನ, ಜ್ಞೇಯ, ಇವುಗಳ ಪರಿಚಯವನ್ನು ಕೃಪೆಮಾಡು."

(೧೩–೧)

"ಕೌಂತೇಯ, ಈ ಶರೀರವೇ ಕ್ಷೇತ್ರ. ಇದನ್ನರಿತವನು ಕ್ಷೇತ್ರಜ್ಞ. ಈ ಎಲ್ಲ ಶರೀರಗಳಲ್ಲಿರುವ ನನ್ನನ್ನೂ ಕ್ಷೆತ್ರಜ್ಞನೆಂಬರು. ಇವೆರಡನ್ನು ತಿಳಿಯುವುದೇ ಜ್ಞಾನ. ಇನ್ನು ಈ ಕ್ಷೇತ್ರದ ಸ್ವರೂಪವನ್ನೂ ಕ್ಷೇತ್ರಜ್ಞನ ಪ್ರಭಾವವನ್ನೂ ಸಂಕ್ಷೇಪವಾಗಿ ಹೇಳುವೆನು ಕೇಳು. (೧೩,೨)

ಪ್ರಕೃತಿ :—ಮಹಾ ಭೂತಗಳು, ಅಹಂಕಾರ, ಮಹತ್ತತ್ತ್ವ, ಪ್ರಕೃತಿ, ಮನಸ್ಸಿನಿಂದ ಕೂಡಿದ ಹತ್ತು ಇಂದ್ರಿಯಗಳು, ಶಬ್ದಾದಿ ಐದು ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ಶರೀರ, ಮನಃಪ್ರವೃತ್ತಿ ಮತ್ತು ಪ್ರಾಣಾದಿಗಳೆಲ್ಲವೂ ಸೇರಿ ಕ್ಷೇತ್ರವೆನಿಸುವುದು. (೧೩,೫–೬)

ಜ್ಞಾನ :–ಗರ್ವವಿಲ್ಲದಿರುವಿಕೆ, ದಂಭವಿಲ್ಲದಿರುವಿಕೆ, ಅಹಿಂಸೆ, ಕ್ಷಮೆ, ಸರಳತೆ. ಗುರುಹಿರಿಯರ ಸೇವೆ, ಶೌಚ, ಸ್ಥೈರ್ಯ, ಮನೋನಿಗ್ರಹ, ವೈರಾಗ್ಯ, ಹುಟ್ಟು ಸಾವುಗಳ ತಿಳಿವಳಿಕೆ, ಸತಿಸುತಾದಿಗಳಲ್ಲಿ ಮಮಕಾರವಿಲ್ಲದಿರುವಿಕೆ, ಇಷ್ಟಾ

ನಿಷ್ಟ ಪ್ರಾಪ್ತಿಯಲ್ಲಿ ಸಮಭಾವ, ಭಗವಂತನಲ್ಲಿ ಅನನ್ಯಭಕ್ತಿ, ಏಕಾಂತವಾಸದಲ್ಲಿ ಆಸಕ್ತಿ, ಜನಸಂಸರ್ಗದಿಂದ ದೂರವಿರುವಿಕೆ, ತತ್ತ್ವವಿಚಾರದಲ್ಲಿ ಪ್ರೀತಿ, ತತ್ತ್ವಜ್ಞಾನ ಲಭ್ಯವಾದ ಮುಕ್ತಿಯಲ್ಲಿ ಅಭಿಲಾಷೆ, ಮುಂತಾದುವು ಜ್ಞಾನಕ್ಕೆ ಸಾಧನಗಳಾದ್ದರಿಂದ ಇವೆಲ್ಲವೂ ಜ್ಞಾನವೆಂದೇ ಉಕ್ತವಾಗಿವೆ. ಇದಕ್ಕಿಂತ ಬೇರೆಯಾದುದೆಲ್ಲ ಅಜ್ಞಾನವೇ. (೧೩,೭–೧೧)

**ಜ್ಞೇಯ** :—ಪರಬ್ರಹ್ಮವೇ. ಆ ಬ್ರಹ್ಮವನ್ನರಿತವನು ಮುಕ್ತನು. (೧೩,೧೨)

## ಪರಬ್ರಹ್ಮಸ್ವರೂಪ

ಪರಬ್ರಹ್ಮಸ್ವರೂಪವು ಎಲ್ಲೆಲ್ಲಿಯೂ ತುಂಬಿದೆ. ಅದು ಎಲ್ಲೆಡೆಯೂ ತನ್ನ ಕೈ ಕಾಲು ತಲೆ ಕಣ್ಣು ಮುಖಗಳನ್ನು ಹರಡಿದೆ. ಜ್ಞೇಯವಾದ ಪರಬ್ರಹ್ಮವು ಎಲ್ಲ ಇಂದ್ರಿಯ ವ್ಯಾಪಾರಗಳಿಂದ ವ್ಯಾಪಾರವುಳ್ಳ ವಸ್ತುವಿನಂತೆ ಕಂಡರೂ ಅದು ಇಂದ್ರಿಯ ವ್ಯಾಪಾರಕ್ಕೆ ಅಂಟಿಲ್ಲ. ಸುಖದುಃಖಾದಿಗಳನ್ನು ಅನುಭವಿಸುತ್ತಿದ್ದರೂ ಅದು ನಿರ್ಗುಣ; ಎಲ್ಲ ಪ್ರಾಣಿಗಳ ಒಳಗೂ ಹೊರಗೂ ತುಂಬಿರುವುದು. ಅಜ್ಞಾನಿಗಳು ಅದನ್ನರಿಯರು. ಅದು ಜ್ಯೋತಿಗಳಿಗೆ ಜ್ಯೋತಿ. ಕತ್ತಲಿನ ಆಚೆಗೆ ಇದೆ. ಅದೇ ಜ್ಞಾನ, ಜ್ಞಾನಗಮ್ಯ, ಜ್ಞೇಯವೆನಿಸಿ ಸಮಸ್ತರ ಹೃದಯದಲ್ಲಿಯೂ ಸ್ಥಿರವಾಗಿರುವುದು. (೧೩,೧೪–೧೮)

## ಪ್ರಕೃತಿ-ಪುರುಷ

ಪ್ರಕೃತಿ-ಪುರುಷ ಎರಡೂ ಅನಾದಿ. ರಾಗದ್ವೇಷಾದಿ ವಿಕಾರಗಳೂ, ಸತ್ತ್ವರಜಸ್ತಮೋಗುಣಗಳೂ ಪ್ರಕೃತಿಯಿಂದ ಹುಟ್ಟಿದವು. ಕಾರ್ಯಕಾರಣಗಳಿಗೆ ಹೇತುವಾದುದೇ ಪ್ರಕೃತಿ. ಸುಖದುಃಖಗಳಿಗೆ ಹೇತು ಪುರುಷ. ಪ್ರಕೃತಿಯನ್ನು ಆಶ್ರಯಿಸಿರುವ ಪುರುಷನು ಪ್ರಕೃತಿಗತವಾದ ತ್ರಿಗುಣಗಳನ್ನು ಭೋಗಿಸುವನು. ಈ ಗುಣಸಂಬಂಧವೇ ಅವನ ಹುಟ್ಟಿಗೆ ಕಾರಣ.

ದೇಹದಲ್ಲಿರುವ ಪರಮಪುರುಷನು ಮಾತ್ರ ಇದೆಲ್ಲಕ್ಕು ಸಾಕ್ಷಿ, ಅನುಗ್ರಹಿಸುವವನು, ಭರ್ತೃ, ಜೀವರೂಪದಿಂದ ಭೋಕ್ತೃ, ಮಹೇಶ್ವರ, ಮತ್ತು ಪರಮಾತ್ಮನೆಂದು ಕರೆಯಲ್ಪಡುವನು. ಹೀಗೆ ಪ್ರಕೃತಿ ಪುರುಷರನ್ನು ಸರಿಯಾಗಿ ತಿಳಿಯಬೇಕು. ತಿಳಿದು ನಡೆದಪಕ್ಷದಲ್ಲಿ ಅವನಿಗೆ ಪುನರ್ಜನ್ಮವಿಲ್ಲ. (೧೩,೧೯–೨೩)

ಪ್ರಕೃತಿಯಿಂದ ಎಲ್ಲ ಕೆಲಸಗಳೂ ನಡೆಯುವುವೇ ಹೊರತು ಆತ್ಮನಿಂದಲ್ಲ ಎಂದು ತಿಳಿದವನೇ ಜ್ಞಾನಿ. ಅವನು ಅನುಭವದಿಂದ ಎಲ್ಲವನ್ನೂ ಬ್ರಹ್ಮದಲ್ಲಿಯೇ ಕಾಣುವನು. ಬ್ರಹ್ಮವನ್ನು ಪಡೆಯುವನು. ಅನಾದಿ ಪರಮಾತ್ಮನು ದೇಹದಲ್ಲಿದ್ದರೂ ನಿರ್ಲಿಪ್ತನು. ಕ್ಷೇತ್ರಿಯಾದ ಆತ್ಮನು ದೇಹದಲ್ಲಿದ್ದುಕೊಂಡು ಶರೀರಾದ್ಯಂತವನ್ನು ಬೆಳಗುವನ್ನು, ಸೂರ್ಯನು ವಿಶ್ವವನ್ನು ಬೆಳಗುವಂತೆ. ಹೀಗೆ ಜ್ಞಾನನೇತ್ರದಿಂದ ಕ್ಷೇತ್ರ, ಕ್ಷೇತ್ರಜ್ಞರನ್ನೂ, ಪ್ರಕೃತಿ-ವಮುಕ್ತಿಗಳ ಉಪಾಯವನ್ನು ತಿಳಿದವನು ಪರಮ ಪದವಿಯನ್ನೂ ಹೊಂದುವನು.” (೧೩,೨೯–೩೪)

## ಗುಣತ್ರಯ ವಿಭಾಗ

"ಅರ್ಜುನ, ತ್ರಿಗುಣಾತ್ಮಕ ಪ್ರಕೃತಿಯೇ ನನ್ನ ಯೋನಿ. ನಾನು ಅದರಲ್ಲಿ ಗರ್ಭಾಧಾನಮಾಡುತ್ತೇನೆ. ಅದರಲ್ಲಿ ಸಮಸ್ತ ಪ್ರಾಣಿಗಳೂ ಹುಟ್ಟುತ್ತವೆ. ಸತ್ತ್ವರಜಸ್ತಮಸ್ಸುಗಳು ಪ್ರಕೃತಿಯ ಗುಣಗಳು. ಅವು ಅವಿನಾಶಿಯಾದ ಜೀವನನ್ನು ಬಂಧನಕ್ಕೆ ಸಿಕ್ಕಿಸುತ್ತವೆ. (೧೪,೩–೫)

ಇವುಗಳಲ್ಲಿ ಸತ್ತ್ವವು ನಿರ್ಮಲವಾದುದು, ಪ್ರಕಾಶವಾದುದು, ದುಃಖರಹಿತವಾದುದು. ಅದು ಸುಖಾಸಕ್ತಿಯಿಂದಲೂ, ಜ್ಞಾನಾಭಿಲಾಷೆಯಿಂದಲೂ ಆತ್ಮನನ್ನು ಬಂಧಿಸುವುದು. ರಜೋಗುಣವು ಇಚ್ಛಾರೂಪವಾದುದು. ಅತ್ಯಾಶೆ, ಅತ್ಯಾಸಕ್ತಿಗಳಿಗೆ ಅದೇ ಮೂಲ. ದೇಹಿಯನ್ನು ಅದು ಕರ್ಮಪಾಶದಲ್ಲಿ ಬಂಧಿಸುವುದು. ಅಜ್ಞಾನದಿಂದ ಹುಟ್ಟಿದುದು ತಪಸ್ಸು. ಮರವೆ, ಆಲಸ್ಯ, ನಿದ್ರೆಗಳು ಅದರ ಸ್ವಭಾವ. ಆತ್ಮನ ಪ್ರಗತಿಗೆ ಈ ತಮಸ್ಸು ಪ್ರತಿಬಂಧಕ. (೧೪,೬–೮)

ಸತ್ತ್ವವು ಅಧಿಕವಾದರೆ ರಜಸ್ತಮಸ್ಸುಗಳು ತಗ್ಗುತ್ತವೆ. ರಜಸ್ಸು ಹೆಚ್ಚಿದರೆ ಸತ್ತ್ವತಮಸ್ಸುಗಳು ಕುಗ್ಗುತ್ತವೆ. ತಮಸ್ಸು ಮಿಗಿಲಾದರೆ ಉಳಿದೆರಡೂ ದುರ್ಬಲವಾಗುತ್ತವೆ. ಸತ್ತ್ವವು ಅಧಿಕವಾದಾಗ ಮರಣವಾದರೆ ಉತ್ತಮ ಗತಿ ಲಭಿಸುತ್ತದೆ. ರಜೋಗುಣದ ಅಭಿವೃದ್ಧಿಕಾಲದಲ್ಲಿ ಸತ್ತರೆ ಸಕಾಮಿಗಳಲ್ಲಿ ಹುಟ್ಟುವನು. ತಮೋಗುಣವು ಉದ್ರಿಕ್ತವಾದಾಗ ಮೃತನಾದರೆ ಪಶ್ವಾದಿಯೋನಿಗಳಲ್ಲಿ ಹುಟ್ಟುವನು. (೧೪,೧೪–೧೫)

ಸಾತ್ತ್ವಿಕದ ಫಲ ಸುಖ ಮತ್ತು ಜ್ಞಾನಗಳು. ರಜಸ್ಸಿಗೆ ದುಃಖವೇ ಫಲ. ತಮಸ್ಸಿಗೆ ಅಜ್ಞಾನ ಫಲ. ಸತ್ವದಿಂದ ಜ್ಞಾನವೂ, ರಜಸ್ಸಿನಿಂದ ಲೋಭವೂ, ತಮಸ್ಸಿನಿಂದ ಮರವೆ, ಅವಿವೇಕ, ಅಜ್ಞಾನಗಳುಂಟಾಗುತ್ತವೆ. ಸತ್ವದಲ್ಲಿರುವವರು ಇಂದ್ರಾದಿಲೋಕಗಳಿಗೂ, ರಜೋಗುಣ ಪ್ರಧಾನರು ಮನುಷ್ಯ ಲೋಕಕ್ಕೂ ಹೋಗುವರಲ್ಲವೆ ತಮಃಪ್ರಧಾನರಾದವರು ಅಧೋ ಲೋಕದಲ್ಲಿ ಆಸುರ ಯೋನಿಗಳಲ್ಲಿ ಹುಟ್ಟುವರು. ಈ ಗುಣ ಗಳನ್ನು ಮೀರಿದವರು ಗುಣಾತೀತರೆನಿಸುವರು." (೧೪,೬—೨೦)

## ಗುಣಾತೀತನ ಲಕ್ಷಣ

೧೯ "ಗುಣಾತೀತನನ್ನು ಗುರ್ತಿಸುವುದು ಹೇಗೆ? ಅವನ ಆಚಾರವಾವುದು? ಅವನು ಗುಣಗಳನ್ನು ದಾಟಿದ್ದು ಹೇಗೆ?" (೧೪,೨೧)

"ಸತ್ತ್ವದಿಂದ ಪ್ರಕಾಶ, ರಜಸ್ಸಿನಿಂದ ಪ್ರವೃತ್ತಿ, ತಮಸ್ಸಿ ನಿಂದ ಮೋಹಗಳು ಹುಟ್ಟುತ್ತವೆ. ಇವು ಪ್ರಾಪ್ತವಾದಾಗ ಗುಣಾತೀತನು ವ್ಯಸನಪಡುವುದಿಲ್ಲ. ಅವು ಲಭಿಸದಿದ್ದರೆ ಅಪೇಕ್ಷಿ ಸುವುದಿಲ್ಲ. ಉದಾಶೀನನಂತಿದ್ದು ಕೇವಲ ಇಂದ್ರಿಯಗಳೇ ಪ್ರಕೃತಿಯ ಕಾರ್ಯಗಳಲ್ಲಿ ಪ್ರವರ್ತಿಸುತ್ತವೆಯೆಂದು ಭಾವಿಸು ವನು. ಸುಖದುಃಖಗಳಲ್ಲಿ ಸಮತೆ, ಕಾಮಿನೀಕಾಂಚನಗಳಲ್ಲಿ ಸಮಬುದ್ಧಿಯುಳ್ಳವನಾಗಿ ದ್ವಂದ್ವಾತೀತನೆನಿಸಿ ಎಲ್ಲ ಕರ್ಮ ಗಳನ್ನು ಬಿಟ್ಟವನು ಗುಣಾತೀತನು. ಇಂಥವನು ಅಖಂಡ ಭಕ್ತಿ

ಯಿಂದ ನನ್ನನ್ನು ಸೇವಿಸಿ ಪುರುಷೋತ್ತಮನಾಗಿ ಬ್ರಹ್ಮಭಾವ ಪಡೆಯುವನು." (೧೪,೨೭)

## ಪುರುಷೋತ್ತಮ ಸ್ವರೂಪ.

"ಗುಣಾತೀತನೇ ಪುರುಷೋತ್ತಮ ಪದವಿಗೇರುವನು. ಕ್ಷರ ಮತ್ತು ಅಕ್ಷರ ಸ್ವರೂಪವನ್ನು ಮೀರಿದುದು ಪುರುಷೋತ್ತಮ ಸ್ವರೂಪ.

ಈ ಸಂಸಾರವೆಂಬುದೊಂದು ವೃಕ್ಷ. ಇದರ ಬುಡ ಮೇಲಿದೆ. ಅಂದರೆ ಅದೇ ಸಂಸಾರಕ್ಕೆ ಮೂಲವಾದ ಪರಬ್ರಹ್ಮ. ಅಂಥ ಬ್ರಹ್ಮದಿಂದ ಹೊರಟ ನಿಕೃಷ್ಟ ಪ್ರಕೃತಿಜನ್ಯ ಮಹದಾದಿ ವಿಶ್ವವೇ ಆ ಮರದ ಶಾಖೆಗಳು. ಋಗಾದಿ ವೇದಗಳು ಅದರ ಎಲೆಗಳು. ಈ ವೃಕ್ಷದ ಯಥಾರ್ಥ ಸ್ವರೂಪವನ್ನರಿಯಬೇಕು. ಮೇಲೆ ಹೇಳಿದ ಮೂರು ಗುಣಗಳಿಂದ ಚಿಗುರಿದ ವಿಷಯಗಳೇ ಎಲೆಗಳು. ಕರ್ಮಬಂಧಕವಾದ ಇದರ ಬೇರುಗಳು ಮನುಷ್ಯ ಲೋಕವನ್ನು ವ್ಯಾಪಿಸಿವೆ. ಇಂಥ ಅಶ್ವತ್ಥವನ್ನು 'ಅಸಂಗ' (ಅನಾಸಕ್ತಿ) ಎಂಬ ಖಡ್ಗದಿಂದ ಕತ್ತರಿಸಿ, ಪುನರಾವೃತ್ತಿ ರಹಿತ ನಾದ ಆದಿ ಪುರುಷನನ್ನು ಶರಣು ಹೊಂದಬೇಕು. ಮಾನ ಮೋಹಗಳನ್ನು ತೊರೆದು, ಅನಾಸಕ್ತನಾಗಿ, ಅಧ್ಯಾತ್ಮವಿಚಾರ ತತ್ಪರನಾದ ದ್ವಂದ್ವಾತೀತನು ಅವ್ಯಯವಾದ ಪರಮ ಪದವಿ ಯನ್ನು ಹೊಂದುವನು." (೧೫,೧–೫)

## ಜೀವನ ಉತ್ಕ್ರಾಂತಿ

"ನನ್ನ ಅಂಶವೇ ಜೀವ. ಇವನು ಮರಣಕಾಲದಲ್ಲಿ

ಪ್ರಕೃತಿ, ಇಂದ್ರಿಯ ಮತ್ತು ಮನಸ್ಸುಗಳನ್ನು ಆಕರ್ಷಿಸುವನು. ಗಾಳಿಯು ಹೂವಿನ ವಾಸನೆಯನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುವಂತೆ ಜೀವನು ಶರೀರವನ್ನು ಬಿಟ್ಟು ಹೋಗುವಾಗ ಮತ್ತು ಶರೀರವನ್ನು ಮತ್ತೆ ಪ್ರವೇಶಿಸುವಾಗ ಮನಸ್ಸಿನಿಂದ ಕೂಡಿರುವ ಈ ಇಂದ್ರಿಯಶಕ್ತಿಗಳನ್ನು ಜೊತೆಗೆ ಒಯ್ಯುವನು. (೧೫,೭–೮)

ಜೀವನು ಶ್ರೋತ್ರಾದಿ ಇಂದ್ರಿಯಗಳು ಮತ್ತು ಮನಸ್ಸನ್ನು ಆಶ್ರಯಿಸಿ ವಿಷಯಗಳನ್ನು ಭೋಗಿಸುವನು. ಜೀವನ ಈ ಸ್ಥಿತಿಯು ಜ್ಞಾನಿಗಳಿಗೆ ಅರಿವಾಗುವುದು. ಅಜ್ಞಾನಿಗಳಿಗೆ ತಿಳಿಯದು. ಸೂರ್ಯಚಂದ್ರಾಗ್ನಿಗಳಲ್ಲಿನ ತೇಜಸ್ಸು ನನ್ನದು. ಎಲ್ಲ ಪ್ರಾಣಿಗಳು ಮತ್ತು ಓಷಧಿಗಳನ್ನು ಧರಿಸಿರುವವನು ನಾನು. ದೇಹಿಗಳ ಜಠರಾಗ್ನಿಯಾಗಿ ಅನ್ನವನ್ನು ಪಚನ ಮಾಡುವವನು ನಾನು. (೧೫,೯–೧೪)

ಅಕ್ಷರ ಎಂದರೆ ಅವಿನಾಶಿ. ಕ್ಷರವೆಂದರೆ ನಶ್ವರವಾದುದು. ಸಮಸ್ತಭೂತಪ್ರಪಂಚವೂ ಕ್ಷರ. ಸ್ಥಿರನಾದ ಅಂತರ್ಯಾಮಿಯೇ ಅಕ್ಷರ. ಕ್ಷರಾಕ್ಷರಗಳಿಗಿಂತ ಬೇರೆಯಾದವನೇ ಉತ್ತಮ ಪುರುಷ, ಪುರುಷೋತ್ತಮ. ಮೂರುಲೋಕಗಳನ್ನು ಆವರಿಸಿರುವವನು ಅವನೇ. ನಾನು ಕ್ಷರವನ್ನು ದಾಟಿ, ಅಕ್ಷರಕ್ಕಿಂತ ಉತ್ತಮನೆನಿಸಿದ್ದೇನೆ. ಆದ್ದರಿಂದಲೇ ನಾನು ಪುರುಷೋತ್ತಮ. ಪುರುಷೋತ್ತಮನೆಂದು ನನ್ನನ್ನು ಅರಿತವನು ಜ್ಞಾನಿ. ಇದು ಗೂಢವಾದ ವಿಷಯ." (೧೫,೧೬–೨೦)

## ದೈವಾಸುರ ಸಂಪತ್ತುಗಳು.

**ದೈವೀಸಂಪತ್ತು :**—ಅಭಯ, ಅಂತಃಕರಣಶುದ್ಧಿ, ಆತ್ಮ ಜ್ಞಾನ, ಆತ್ಮನಿಷ್ಠೆ, ದಾನ, ದಮ, ಯಜ್ಞ, ಸ್ವಾಧ್ಯಾಯ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಕ್ರೋಧವಿಲ್ಲದಿರುವಿಕೆ, ತ್ಯಾಗ, ಶಾಂತಿ, ಪರನಿಂದೆಯಿಲ್ಲದಿರುವುದು, ದಯೆ, ಶುಚಿತ್ವ, ಅದ್ರೋಹ, ನಿರಭಿಮಾನಗಳು ದೈವೀಗುಣಗಳು. (೧೬,೧–೩)

**ಆಸುರೀಸಂಪತ್ತು :**—ದಂಭ, ದರ್ಪ, ದುರಭಿಮಾನ, ಕ್ರೋಧ, ಕಟು ಭಾಷಣ, ಅಜ್ಞಾನಗಳು ಆಸುರೀಗುಣಗಳು. (೧೬–೪)

ಆತ್ಮನ ಬಿಡುಗಡೆಗೆ ದೈವೀಸಂಪತ್ತು, ಪತನಕ್ಕೆ ಆಸುರೀ ಸಂಪತ್ತೂ ಸಹಾಯಕವಾಗುತ್ತದೆ. ಅರ್ಜುನ, ನೀನು ಹೆದರ ಬೇಡ. ನೀನು ದೈವೀಸಂಪತ್ತನ್ನು ಪಡೆದಿರುವೆ. ಲೋಕವು ದೈವೀ ಮತ್ತು ಆಸುರೀ ಎಂಬ ಎರಡುವಿಧ ಸೃಷ್ಟಿಗೆ ಒಳಪಟ್ಟಿದೆ.

## ಆಸುರೀಸಂಪತ್ತಿನ ಪ್ರತಿಕ್ರಿಯೆ.

ಆಸುರೀಸಂಪತ್ತುಳ್ಳವನು ಧರ್ಮಪ್ರವೃತ್ತಿ ಮತ್ತು ಅಧರ್ಮನಿವೃತ್ತಿ ಎಂಬುದನ್ನು ಅರಿಯನು. ಅವನಿಗೆ ಸದಾ ಚಾರ, ಸತ್ಯಗಳ ಅರಿವಿರುವುದಿಲ್ಲ. ಜಗತ್ತು ಅಸತ್ಯ; ಅದಕೆ ಕಾರಣನಾದ ಈಶ್ವರನಿಲ್ಲ. ಅದು ಕೇವಲ ಕಾಮ ಪಿಪಾಸೆಗಾಗಿ ಸೃಷ್ಟಿಯಾಗಿದೆ ಎಂದು ತಿಳಿಯುತ್ತಾನೆ. ಲೋಕಕಂಟಕರೂ,

ಹೃದಯ ಹೀನರೂ ಆದ ಇವರು ಉಗ್ರಕರ್ಮಿಗಳಾಗಿ ಲೋಕ ನಾಶಕ್ಕಾಗಿ ಹೆಚ್ಚುತ್ತಿರುತ್ತಾರೆ. ತೃಪ್ತಿಹೊಂದದ ಕಾಮನೆಗಳಿಂದ ಪೀಡಿತರಾಗಿ ದಂಭ, ಮಾನ, ಮದಾಂಧರಾಗಿ ಅಶುಭಕರ್ಮ ಗಳಲ್ಲಿ ತೊಡಗುತ್ತಾರೆ. ಯಾವಾಗಲೂ ಚಿಂತೆ, ಭೋಗಗಳಲ್ಲಿ ಮುಳುಗಿರುತ್ತಾರೆ. ಇಷ್ಟು ಇಂದು ಗಳಿಸಿದೆ, ಇನ್ನುಳಿದುದನ್ನು ಸಂಪಾದಿಸುವೆನು. ನನ್ನಲ್ಲಿ ಇಷ್ಟುಸಂಪತ್ತಿದೆ. ಇನ್ನಷ್ಟುಗಳಿಸು ವೆನು. ಇವನನ್ನು ಮಟ್ಟಹಾಕಿದೆ. ಉಳಿದವರನ್ನೂ ನೆಲಸಮ ಮಾಡುವೆನು. ನನಗೆ ಸಮನಾರು? ನಾನೆ ದಾತೃ, ನಾನೇ ಸುಖಿ; ಮುಂತಾದ ಅಜ್ಞಾನವಶರಾಗಿ ಇವರು ಮೂಢರಾಗಿರು ತ್ತಾರೆ. (೧೬,೭–೧೭)

ಅಹಂಕಾರ, ಬಲ, ದರ್ಪ, ಕಾಮ ಮತ್ತು ಕ್ರೋಧಗಳಿಂದ ಕೂಡಿ ನನ್ನನ್ನು ಅರಿಯರು. ಅಂತಹವರನ್ನು ಮತ್ತೆ ಮತ್ತೆ ಅಧೋಗತಿಗೆ ತಳ್ಳುವೆನು. ಅವರು ಮತ್ತೆ ಮತ್ತೆ ಪತಿತರೇ ಆಗು ವರು. ಕಾಮ, ಕ್ರೋಧ, ಲೋಭಗಳು ಮಾನವನ ಪತನಕ್ಕೆ ಮುಖ್ಯಕಾರಣಗಳು. ಇವನ್ನು ಗೆದ್ದವನಿಗೆ ಶ್ರೇಯಸ್ಸು. ಶಾಸ್ತ್ರ ಮತ್ತು ಅನುಭವಗಳಿಗೆ ವಿರೋಧವಾಗಿ ವರ್ತಿಸುವವನಿಗೆ ಸದ್ಗತಿ ಯಿಲ್ಲ. ಇದೇ ಶಿಷ್ಟಾಚಾರ. ಶಾಸ್ತ್ರವಿಧಿಯನ್ನು ಮೀರಬಾರದು. ಮಾಡಬೇಕಾದುದಾವುದು, ಮಾಡಬಾರದುದಾವುದು ಎಂಬ ತಿಳು ವಳಿಕೆಗೆ ಶಾಸ್ತ್ರವೇ ಪ್ರಮಾಣ." (೧೬,೧೮–೨೪)

## ಶ್ರದ್ಧೆ ಮೊದಲಾದವುಗಳ ಹಂಚಿಕೆ.

೨೦ "ದೇವ, ಹಾಗಾದರೆ ಶಿಷ್ಟಾಚಾರವನ್ನು ಲೆಕ್ಕಿಸದೆ ಕೇವಲ ಶ್ರದ್ಧೆಯಿಂದಲೇ ಉಪಾಸನೆಮಾಡುವವರಿಗೆ ಯಾವ ಗತಿ?

ಅವೇನು ಸಾತ್ತ್ವಿಕವೊ, ರಾಜಸವೊ ಅಥವಾ ತಾಮಸವೊ?"
(೧೭,೧)

"ಶ್ರದ್ಧೆಯು ಮೂರು ವಿಧ. ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾದ ಶ್ರದ್ಧೆಯೂ ಪೂರ್ವಜನ್ಮ ಸಂಸ್ಕಾರಕ್ಕೆ ಅನುಗುಣವಾದುದು. ಆಯಾವಿಧವಾದ ಶ್ರದ್ಧೆಯಿಂದ ಕೂಡಿದವರನ್ನು ಸಾತ್ವಿಕರು, ರಾಜಸರು ಮತ್ತು ತಾಮಸರೆಂದು ಕರೆಯುವರು. ಸಾತ್ವಿಕರು ದೇವತೆಗಳನ್ನೂ, ರಾಜಸರು ಯಕ್ಷರಾಕ್ಷಸರನ್ನೂ ತಾಮಸರು ಭೂತಗಳನ್ನೂ ಆರಾಧಿಸುವರು. ಶಾಸ್ತ್ರವನ್ನು ಅರಿಯದಿದ್ದರೂ ಸಾತ್ವಿಕನ ಆಚರಣೆ ಶಿಷ್ಟಾಚಾರವನ್ನು ಮೀರಿರುವುದಿಲ್ಲ. ಇಂಥವರು ಬಹುವಿರಳ. (೧೭,೨–೪)

ರಾಜಸ ಮತ್ತು ತಾಮಸರ ವ್ಯವಹಾರಗಳು ಶಾಸ್ತ್ರವಿರುದ್ಧವಾಗಿರುತ್ತವೆ. ಅವು ದಂಭ, ಕಾಮ, ಕ್ರೋಧಗಳಿಂದ ಕಲುಷಿತವಾಗಿರುತ್ತವೆ. ಇವರು ತಮ್ಮ ಶರೀರದಲ್ಲಿನ ಪಂಚಭೂತಗಳನ್ನೂ ಪೀಡಿಸುವರಲ್ಲದೆ ಒಳಗಿರುವ ನನಗೆ ಕೂಡ ಕಷ್ಟಕೊಡುವರು.
(೧೭,೫–೬)

**ಆಹಾರತ್ರಯ** :—ಆಹಾರವು ಕೂಡ ಸಾತ್ತ್ವಿಕ, ರಾಜಸ ಮತ್ತು ತಾಮಸವೆಂದು ಮೂರು ವಿಧ. ಸಾತ್ತ್ವಿಕರಿಗೆ ಆಯುಷ್ಯ, ಸಾತ್ವಿಕ ಬುದ್ಧಿ, ಬಲ, ಆರೋಗ್ಯ, ಸುಖ ಮತ್ತು ರುಚಿಗಳನ್ನು ಹೆಚ್ಚಿಸುವ ಆಹಾರದಲ್ಲಿ ಅಪೇಕ್ಷೆ. ರಾಜಸರಿಗೆ ಉಪ್ಪು, ಹುಳಿ, ಸಿಹಿ, ಕಹಿ, ಕಾರ ಮತ್ತು ಒಗರು ಮುಂತಾದ ಷಡ್ರುಚಿಗಳಲ್ಲಿ ಆಸಕ್ತಿ ಮಿಗಿಲು. ತಾಮಸರಿಗೆ ತಂಗಳು, ನೀರಸ, ದುರ್ಗಂಧ

ಯುಕ್ತ, ಹಳಸಿದ್ದು ಮತ್ತು ಎಂಜಲು ಆಹಾರಗಳಲ್ಲಿ ಅಭಿರುಚಿ.
(೧೭,೭-೧೦)

**ಯಜ್ಞತ್ರಯ** :—ನಿಷ್ಕಾಮ ಬುದ್ಧಿಯಿಂದ ಶಾಸ್ತ್ರೋಕ್ತವಾಗಿ ಕರ್ತವ್ಯದೃಷ್ಟಿಯಿಂದ ಮನಃಪೂರ್ವಕವಾಗಿ ಮಾಡಿದ ಯಜ್ಞವು ಸಾತ್ತ್ವಿಕ. ಫಲಾಭಿಲಾಷೆಯಿಂದ ದಂಭಕ್ಕಾಗಿ ಮಾಡಿದ್ದು ರಾಜಸ. ವಿಧಿರಹಿತವಾಗಿ, ಅನ್ನದಾನಾದಿ ವಿನಿಯೋಗವಿಲ್ಲದೆ ಔದಾರ್ಯವಿಲ್ಲದೆ ಮಾಡಿದ್ದು ತಾಮಸ.
(೧೭,೧೧—೧೩)

**ತಪಸ್ತ್ರಯ** :—ದೇವ, ದ್ವಿಜ, ಗುರು ಹಿರಿಯರ ಸೇವೆ, ಶೌಚ, ಸರಳತೆ, ಬ್ರಹ್ಮಚರ್ಯ, ಅಹಿಂಸೆಗಳು ಶಾರೀರಕ ತಪಸ್ಸು. ಉದ್ವೇಗಕರವಲ್ಲದ ಮಾತು, ಸತ್ಯವೂ ಪ್ರಿಯವೂ ಪರಿಣಾಮದಲ್ಲಿ ಹಿತಕರವೂ ಆದ ನುಡಿ, ಸದ್‌ಗ್ರಂಥಗಳ ಅಭ್ಯಾಸಗಳು ವಾಚಿಕ ತಪಸ್ಸು. ಮನಸ್ಸಿನ ಪ್ರಸನ್ನತೆ, ಸೌಮ್ಯಸ್ವಭಾವ, ಮೌನ, ಆತ್ಮಸಂಯಮ, ಭಾವಶುದ್ಧಿ ಇವುಗಳು ಮಾನಸಿಕ ತಪಸ್ಸು.

ನಿಷ್ಕಾಮ ಬುದ್ಧಿಯಿಂದ ಮೇಲೆ ಹೇಳಿದ ಮೂರುವಿಧ ತಪಸ್ಸುಗಳನ್ನು ಮಾಡಿದರೆ ಸಾತ್ತ್ವಿಕ ತಪಸ್ಸೆಂದು ಹೆಸರು. ಸತ್ಕಾರ, ಬಹುಮಾನ, ಪೂಜಾಪೇಕ್ಷೆ ಮತ್ತು ದಂಭದಿಂದ ಮಾಡಿದ್ದು ರಾಜಸ ತಪಸ್ಸು. ದುರಾಗ್ರಹದಿಂದ ಇತರರ ಪೀಡೆಗಾಗಿ ಮಾಡುವುದು ತಾಮಸ. (೧೭,೧೪-೧೯)

**ದಾನತ್ರಯ** :—ಪ್ರತಿಫಲಾಪೇಕ್ಷೆಯಿಲ್ಲದೆ ಸತ್ಪಾತ್ರಕ್ಕೆ ನೀಡುವುದು ಸಾತ್ತ್ವಿಕ ದಾನ. ಪ್ರತಿಫಲಾಕಾಂಕ್ಷೆಯಿಂದ ನೊಂದು

ಕೊಡುವುದು ರಾಜಸ. ತಿರಸ್ಕಾರದಿಂದ ಕೊಟ್ಟದ್ದು ತಾಮಸ ದಾನ." (೧೭,೨೦–೨೨)

## ಪರಬ್ರಹ್ಮದ ಸ್ವರೂಪ

"ಪರಬ್ರಹ್ಮದ ಸ್ವರೂಪವು ಓಂ, ತತ್, ಸತ್ ಎಂದು ಮೂರು ವಿಧ. ಈ ಪರಬ್ರಹ್ಮದಿಂದ ಸೃಷ್ಟಿಯ ಮೊದಲು ಬ್ರಾಹ್ಮಣ, ವೇದ ಮತ್ತು ಯಜ್ಞಗಳು ನಿರ್ಮಿತವಾದವು. ಆದ್ದರಿಂದಲೇ ದಾನ ಮತ್ತು ತಪಸ್ಸುಗಳನ್ನು ಓಂಕಾರ ಪೂರ್ವಕವಾಗಿ ಉಚ್ಚರಿಸಿ ವಿಧ್ಯುಕ್ತವಾಗಿ ಮಾಡುತ್ತಿರುವುದು. (೧೭–೨೪)

ಮೋಕ್ಷಾಭಿಲಾಷಿಗಳು 'ತತ್' ಎಂದು ಉಚ್ಚರಿಸಿ, ನಿಷ್ಕಾಮದಿಂದ ಯಜ್ಞದಾನಾದಿಗಳನ್ನು ಮಾಡುವರು. ಸದ್‌ಭಾವನೆ ಮತ್ತು ಸಾಧುಭಾವನೆಯಲ್ಲಿ 'ಸತ್' ಶಬ್ದವು ಉಪಯುಕ್ತವಾಗುತ್ತದೆ. ಯಜ್ಞ, ದಾನ ಮತ್ತು ತಪಸ್ಸುಗಳ ಸ್ಥಿತಿಯೂ, ಅವುಗಳಿಗಾಗಿ ಮಾಡುವ ಕರ್ಮದ ಸ್ಥಿತಿಯೂ 'ಸತ್' ಎನಿಸುವುದು. ಅಶ್ರದ್ಧೆಯಿಂದ ಮಾಡಿದ ಹವನ, ದಾನ, ತಪಸ್ಸುಗಳು 'ಅಸತ್' ಎನಿಸುವುವು. ಅವಕ್ಕೆ ಇಹಪರಗಳಲ್ಲಿ ಸತ್ಫಲವಿಲ್ಲ. (೧೭–೨೮)

## ಸಂನ್ಯಾಸ ಮತ್ತು ತ್ಯಾಗಗಳ ಗುಟ್ಟು

೨೧ "ಭಗವನ್, ಸಂನ್ಯಾಸ ಮತ್ತು ತ್ಯಾಗ ಇವುಗಳ ರಹಸ್ಯವನ್ನು ಬೇರೆಬೇರೆಯಾಗಿ ವಿವರಿಸುವ ಕೃಪೆ ಮಾಡು," (೧೮–೧)

"ಸಂನ್ಯಾಸವೆಂದರೆ ಕಾಮ್ಯಕರ್ಮಗಳ ತ್ಯಾಗ. ತ್ಯಾಗವೆಂದರೆ ಸರ್ವ ಕರ್ಮಗಳ ಫಲತ್ಯಾಗ. ಕರ್ಮಗಳು ತ್ಯಾಜ್ಯವೆಂದು ಕೆಲವರೂ, ತ್ಯಾಜ್ಯವಲ್ಲವೆಂದು ಕೆಲವರೂ ಹೇಳುವರು. ಆದರೆ ಈ ಬಗ್ಗೆ ನನ್ನ ನಿರ್ಣಯವಿಷ್ಟು ;—ತ್ಯಾಗವು ಮೂರು ವಿಧ. ಯಜ್ಞ, ದಾನ, ತಪಸ್ಸುಗಳು ತ್ಯಾಜ್ಯವಲ್ಲ. ಏಕೆಂದರೆ ಅವು ವಿವೇಕಿಗಳನ್ನು ಪಾವನಗೊಳಿಸುವುವು. ಆದರೆ ಅವನ್ನು ಫಲಾಪೇಕ್ಷೆಯಿಲ್ಲವೆ ಈಶ್ವರಾರ್ಪಿತ ಬುದ್ಧಿಯಿಂದ ಮಾಡಬೇಕು. ಅವಶ್ಯವಾಗಿ ಮಾಡಬೇಕಾಗಿರುವ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡಬಾರದು. ಹಾಗೆ ಮಾಡದೆ ಬಿಟ್ಟರೆ ಅಂಥ ತ್ಯಾಗವು ತಾಮಸವೆನಿಸುವುದು. ಮಾಡುವುದಕ್ಕೆ ಕಷ್ಟವೆಂದು ಹೆದರಿ ಕರ್ಮವನ್ನು ಬಿಟ್ಟಪಕ್ಷದಲ್ಲಿ ರಾಜಸವೆನಿಸುವುದು. ಕರ್ತವ್ಯಬುದ್ಧಿ ಹಾಗೂ ನಿಷ್ಕಾಮದಿಂದ ಕರ್ಮಗಳನ್ನೆಸಗುವುದು ಸಾತ್ತ್ವಿಕ. ದೇಹವನ್ನು ಧರಿಸಿದ ಮೇಲೆ ಕರ್ಮವನ್ನು ಬಿಡಲು ಸಾಧ್ಯವಿಲ್ಲ. ಕರ್ಮಫಲವನ್ನು ಮಾತ್ರ ಬಿಡಬಹುದು. ಸಕಾಮರಿಗೆ ಮರಣಾನಂತರ ಅವರೆಸಗಿದ ಒಳ್ಳೆಯ ಮತ್ತು ಕೆಟ್ಟ ಕರ್ಮಫಲಗಳ ಫಲ ಲಭಿಸುವುದು. ನಿಷ್ಕಾಮರಿಗೆ ಕರ್ಮಫಲ ಲಭಿಸುವುದಿಲ್ಲ.
(೧೮,೨–೧೨)

ಕರ್ಮಸಿದ್ಧಿಗೆ ಸಾಂಖ್ಯ (ವೇದಾಂತ) ಶಾಸ್ತ್ರದಲ್ಲಿ ಐದು ಕಾರಣಗಳು ಉಕ್ತವಾಗಿವೆ. ಕ್ಷೇತ್ರ, ಕರ್ತೃ, ಭಿನ್ನಾಭಿನ್ನ ಕಾರಣಗಳು (ಇಂದ್ರಿಯ ಮತ್ತು ಮನಸ್ಸು), ಭಿನ್ನಭಿನ್ನ ಕ್ರಿಯೆಗಳು (ಪ್ರಾಣಾದಿ ಪಂಚವಾಯುಗಳು) ಮತ್ತು ದೈವಗಳು. ಮಾನವನು ತ್ರಿಕರಣಗಳಿಂದ ಮಾಡುವ ಪ್ರತಿಯೊಂದು ಕೆಲಸಕ್ಕೂ ಈ

ಐದೂ ಕಾರಣಗಳು. ತಿಳಿಯದವರು ಮನಸ್ಸು ಮಾತು ಮೈಗ ಳೆಂಬ ತ್ರಿಕರಣಗಳಿಂದ ಮಾಡುವ ಕರ್ಮಗಳಿಗೆ ಆತ್ಮನೇ ಕಾರಣ ನೆಂದು ತಿಳಿಯುವರು. ನಿರಹಂಕಾರಿಯಾಗಿ, ಹಿಂದೆ ಹೇಳಿದಂತೆ ಕರ್ಮ ಸಂಬಂಧವು ತನಗಿಲ್ಲವೆಂದು ಭಾವಿಸಿ, ಎಲ್ಲಾ ಪ್ರಾಣಿ ಗಳನ್ನು ಸಂಹರಿಸಿದರೂ ಅವನಿಗೆ ಪಾಪಲೇಪವಾಗುವುದಿಲ್ಲ.

(೧೮,೧೩-೧೭)

ಕರ್ಮವನ್ನು ಪ್ರೇರಿಸುವುದರಲ್ಲಿಯೂ ಮೂರು ತತ್ತ್ವ ಗಳಿವೆ. ಜ್ಞಾನ, ಜ್ಞೇಯ ಮತ್ತು ಪರಿಜ್ಞಾತೃ ಎಂದು. ಇವು ಎಲ್ಲ ಕರ್ಮಗಳಿಗೂ ಹೇತುಗಳು. ಇಂದ್ರಿಯಗಳು, ವಿಷಯ ಗಳು, ಕರ್ತೃ ಈ ಮೂರು ಕಾರ್ಯನಿರ್ವಾಹಕ ಸಾಮಗ್ರಿಗಳು. ಎಲ್ಲ ಪ್ರಾಣಿಗಳಲ್ಲಿಯೂ ಅವಿನಾಶಿಯಾದ ಪರಮಾತ್ಮನನ್ನು ತಿಳಿವುದು ಸಾತ್ತ್ವಿಕಜ್ಞಾನ. ಬೇರೆಬೇರೆ ಎಂದು ತಿಳಿಯುವುದು ರಾಜಸ. ಶರೀರವೇ ಆತ್ಮವೆಂದು ತಿಳಿಯುವುದು ತಾಮಸ.

(೧೮-೨೨)

ಫಲದಾಸೆಯಿಲ್ಲದೆ ನಿರಾಸಕ್ತನಾಗಿ ಮಾಡುವ ಕರ್ಮವು ಸಾತ್ತ್ವಿಕ. ಭೋಗದ ಆಸೆಯಿಂದ 'ನಾನು ಮಾಡುವೆನು' ಎಂಬ ಅಭಿಮಾನದಿಂದ ಮಾಡುವುದು ರಾಜಸ. ಮೋಹಪರವಶ ನಾಗಿ ಮಾಡುವುದು ತಾಮಸ. ನಿಷ್ಕಾಮದಿಂದ ಮಾಡುವನು ಸಾತ್ತ್ವಿಕಕರ್ತೃ. ಫಲಾಭಿಲಾಷೆಯಿಂದ ಮಾಡುವನು ರಾಜಸ ಕರ್ತೃ. ಅವ್ಯವಸ್ಥಿತಚಿತ್ತನೂ, ಅಸಂಸ್ಕಾರಿಯೂ ಮೂರ್ಖನೂ ಆದವನು ತಾಮಸಕರ್ತೃವೆನಿಸುವನು. (೧೮,೨೭-೨೮)

## ಬುದ್ಧಿ, ಧೃತಿ ಮತ್ತು ಸುಖಗಳ ತ್ರೈವಿಧ್ಯ

ಪ್ರವೃತ್ತಿ, ನಿವೃತ್ತಿ, ಕಾರ್ಯ, ಅಕಾರ್ಯ, ಭಯ, ಅಭಯ, ಬಂಧ ಮೋಕ್ಷಗಳ ವ್ಯತ್ಯಾಸವನ್ನು ತಿಳಿಯುವುದು ಸಾತ್ವಿಕಬುದ್ಧಿ. ಇವುಗಳ ವಿವೇಚನೆಯನ್ನು ಅನುಚಿತ ರೀತಿಯಿಂದ ತಿಳಿವುದು ರಾಜಸಬುದ್ಧಿ. ಅಧರ್ಮವನ್ನು ಧರ್ಮವೆಂದು ವಿಪರೀತವಾಗಿ ತಿಳಿವುದು ತಾಮಸಬುದ್ಧಿ. (೧೮,೩೦–೩೨)

ಒಂದೇ ನಿಷ್ಠೆಯಿಂದ ಪ್ರಾಣೇಂದ್ರಿಯಗಳನ್ನು ದಾರಿತಪ್ಪದಂತೆ ತಡೆಯುವುದು ಸಾತ್ವಿಕ ಧೃತಿ. ಫಲಾಪೇಕ್ಷೆಯಿಂದ ಧರ್ಮಾರ್ಥಕಾಮಗಳನ್ನು ಧರಿಸಿರುವುದು ರಾಜಸ ಧೃತಿ. ನಿದ್ರೆ, ಭಯ, ವ್ಯಸನಾದಿಗಳಿಂದ ದುರ್ಬುದ್ಧಿಯುಳ್ಳವನ ಧೃತಿಯು ತಾಮಸ. (೧೮,೩೩–೩೫)

ಪ್ರಾರಂಭದಲ್ಲಿ ಕಷ್ಟವೆನಿಸಿದರೂ ಪರಿಣಾಮದಲ್ಲಿ ಒಳ್ಳೆಯದಾಗಿ ಅಭ್ಯಾಸದಿಂದ ಸುಖಕರವೆನಿಸಿ ದುಃಖವನ್ನು ಹೋಗಲಾಡಿಸುವುದು ಸಾತ್ತ್ವಿಕ ಸುಖ. ವಿಷಯೇಂದ್ರಿಯಗಳ ಸಂಸರ್ಗದಿಂದ ಪ್ರಾರಂಭದಲ್ಲಿ ಅಮೃತದಂತೆ ಕಂಡು ಕೊನೆಗೆ ವಿಷವಾಗುವುದು ರಾಜಸ ಸುಖ. ಮೊದಲು ಮತ್ತು ಕಡೆಗಳಲ್ಲಿ ಮೋಹಕರವಾಗಿರುವುದು ತಾಮಸ. ಇಂಥ ಪ್ರಕೃತಿಯ ಗುಣಗಳಿಂದ ಮುಕ್ತರಾದವರು ವಿರಳ. (೧೮,೩೬–೪೦)

## ಬ್ರಾಹ್ಮಣಾದಿವರ್ಣಗಳ ಸ್ವಭಾವಸಿದ್ಧಗುಣಗಳು

ಶಮ, ದಮ, ತಪಸ್ಸು, ಶೌಚ, ಕ್ಷಮೆ, ಶಾಸ್ತ್ರದಿಂದುಂಟಾದ ಜ್ಞಾನ ಮತ್ತು ಅನುಭವದಿಂದುಂಟಾದ ಜ್ಞಾನ, ಆಸ್ತಿಕತೆಗಳು ಬ್ರಾಹ್ಮಣ್ಯದ ಸ್ವಭಾವಸಿದ್ಧವಾದ ಗುಣಗಳು. ಶೌರ್ಯ, ತೇಜಸ್ಸು, ಧೈರ್ಯ, ದಕ್ಷತೆ, ಯುದ್ಧದಲ್ಲಿ ಹಿಂದಿರುಗದಿರುವುದು, ದಾನ, ಆಳ್ವಿಕೆಗಳು ಕ್ಷತ್ರಿಯನ ಗುಣಗಳು. ಬೇಸಾಯ, ಪಶುಪಾಲನೆ, ವ್ಯಾಪಾರಗಳು ವೈಶ್ಯನ ಗುಣಗಳು. ಸೇವಾವೃತ್ತಿಮುಂತಾದುವು ಶೂದ್ರನ ಗುಣಗಳು. (೧೮, ೪೨–೪೪)

ಮೇಲೆ ಹೇಳಿದಂತೆ ಅವರವರಿಗೆ ಅಭಿರುಚಿಯೆನಿಸುವ ಕರ್ಮಗಳಲ್ಲಿ ತತ್ಪರರಾಗಿ ಮಾನವರು ಸಿದ್ಧಿಯನ್ನು ಪಡೆಯುವರು. ಅವನವನ ಸ್ವಭಾವಸಿದ್ಧವಾದ ಧರ್ಮ ಎಂದರೆ ಕರ್ತವ್ಯವೇ ಅವನಿಗೆ ಮುಖ್ಯ. ಆ ಕರ್ತವ್ಯ ನಿರ್ವಾಹದಲ್ಲಿಯೇ ಅವನಿಗೆ ಶ್ರೇಯಸ್ಸು. ಪರಧರ್ಮವನ್ನು ಅನುಸರಿಸುವುದು ಯುಕ್ತವಲ್ಲ. ಸ್ವಧರ್ಮಾಚರಣೆಯಿಂದ ಪಾಪಲೇಪವಿಲ್ಲ. ಕರ್ತವ್ಯನಿರ್ವಾಹಮಾಡುವುದರಿಂದಲೇ ಮಾನವನು ಬ್ರಹ್ಮ ಭಾವವನ್ನು ಪಡೆಯುವನು. (೧೮, ೪೫–೪೬)

## ಭಕ್ತಿ ಪಾರಮ್ಯ

"ಹಿಂದೆ ಹೇಳಿದಂತೆ ಭಕ್ತಿಯಿಂದ ನನ್ನ ಸ್ವರೂಪವನ್ನರಿತವನು ನನ್ನನ್ನು ಹೊಂದುತ್ತಾನೆ. ಎಲ್ಲ ಕರ್ಮಫಲವನ್ನೂ ನನಗೆ ಅರ್ಪಿಸಿ ಕರ್ತವ್ಯವನ್ನು ಮಾಡುವನು ಪರಮಪದವಿ ಪಡೆಯು

ವನು. ನನ್ನಲ್ಲಿ ಮನಸ್ಸು ನೆಲೆಸಿದರೆ ಕಷ್ಟಗಳಿಂದ ಪಾರಾಗುವೆ. ಅಹಂಕಾರಪಟ್ಟರೆ ನಾಶವಾಗುವೆ. ಕರ್ತವ್ಯ ವಿಮುಖನಾಗಿ ಯುದ್ಧಮಾಡದೆ ಹೋದರೆ ನಿನ್ನ ನಿಶ್ಚಯ ಸುಳ್ಳಾಗುವುದು. ಏಕೆಂದರೆ ನೀನು ಕ್ಷಾತ್ರಸ್ವಭಾವದವನು. ನಿನ್ನನ್ನು ಯುದ್ಧಕ್ಕೆ ಪ್ರೇರಿಸದೆ ಬಿಡುವುದಿಲ್ಲ. ಮಾಡುವುದಿಲ್ಲವೆಂಬುದಕ್ಕೆ ನೀನು ಸ್ವತಂತ್ರನಲ್ಲ. ಎಲ್ಲ ಪ್ರಾಣಿಗಳ ಹೃದಯದಲ್ಲಿರುವ ಈಶ್ವರನು ತನ್ನ ಮಾಯೆಯಿಂದ, ಯಂತ್ರದಂತೆ ನಿನ್ನನ್ನು ತಿರುಗಿಸುವನು.

(೧೮,೫೮–೬೧)

ಅವನಿಗೆ ಶರಣಾಗಲೇಬೇಕು. ಸರ್ವವನ್ನೂ ಅರ್ಪಿಸಬೇಕು. ಅವನ ಕೃಪೆಯಿಂದ ಪರಮಶಾಂತಿಯನ್ನು ಪಡೆಯುವೆ. ಅತ್ಯಂತ ಗೂಢವಾದ ಈ ದಿವ್ಯಜ್ಞಾನವನ್ನು ನಿನಗೆ ಬೋಧಿಸಿದ್ದೇನೆ. ನೀನಿದನ್ನು ಚೆನ್ನಾಗಿ ವಿಚಾರಮಾಡು. ತರುವಾಯ ನಿನಗೆ ತೋರಿದಂತೆ ಮಾಡು. ನನಗೆ ಪ್ರಿಯನಾದ್ದರಿಂದ ಇಷ್ಟು ಹೇಳಿದೆ. ನನ್ನ ಭಕ್ತನಾಗು, ನನ್ನನ್ನು ಪೂಜಿಸು, ನನಗೆ ನಮಸ್ಕರಿಸು. ಹಾಗೆ ಮಾಡಿದರೆ ನಿಜವಾಗಿಯೂ ನನ್ನನ್ನೇ ಸೇರುವೆ.

(೧೮,೬೨–೬೬)

ಇಂಥ ರಹಸ್ಯವನ್ನು ತಪಸ್ವಿಯಲ್ಲದವನಿಗೆ, ಭಕ್ತನಲ್ಲದವನಿಗೆ, ಗುರುಶುಶ್ರೂಷೆಮಾಡದವನಿಗೆ ಹೇಳಬಾರದು. ನನ್ನ ಭಕ್ತರಿಗೆ ಮಾತ್ರ ಇದನ್ನು ಹೇಳಬೇಕು. ನನ್ನಲ್ಲಿ ಪರಮ ಭಕ್ತಿ ಮಾಡುವುದರಿಂದ ನನ್ನನ್ನೇ ಹೊಂದುವೆ. (೧೮, ೬೭–೬೯)

೨೨. ಅಚ್ಯುತ, ನಿನ್ನ ಅನುಗ್ರಹದಿಂದ ನನ್ನ ಅಜ್ಞಾನ ಅಳಿಯಿತು, ಜ್ಞಾನೋದಯವಾಯಿತು, ಸಂದೇಹಕ್ಕೆ ಸಮಾಧಾನ ದೊರೆಯಿತು. ಮನಸ್ಸು ಸ್ಥಿರವಾಯಿತು, ನಿನ್ನ ಅಪ್ಪಣೆಯಂತೆ ನಡೆಯುವೆನು."

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥



# ಗೀತೆಯ ಅಂತರ್ವಾಣಿ

## ಭಕ್ತಿ ಮೀಮಾಂಸೆ

ಭಗವದ್ಗೀತೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿದ ಮೇಲೆ ತೋರುವ ಸಾರಾಂಶವಿಷ್ಟು:—ನಿಷ್ಕಾಮಕರ್ಮ, ಸಮತೆ ಮತ್ತು ಅನನ್ಯಭಕ್ತಿಗಳು ಗೀತೆಯ ಸಾರಸರ್ವಸ್ವ. ಈವರೆಗೆ ಮಾಡಿದ ಪ್ರಶ್ನೆಗಳಿಗೆ ಉತ್ತರಿಸಿದ ಭಗವಂತನ ಉಪದೇಶದಲ್ಲಿ ಇವು ಮೂರು ಓತಪ್ರೋತವಾಗಿ ಉಕ್ತವಾಗಿವೆ. ಇವುಗಳಲ್ಲಿ ಬಹು ಮುಖ್ಯವಾದುದು ಭಗವಂತನಲ್ಲಿ ಮಾಡುವ ಅನನ್ಯ ಭಕ್ತಿ. ಇದರಲ್ಲಿ ಉಳಿದೆರಡೂ ಅಂತರ್ಗತವಾಗುತ್ತವೆ.

ಈ ಸಂದರ್ಭದಲ್ಲಿ ಭಕ್ತಿಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅಪ್ರಕೃತವಾಗಲಾರದು. 'ಭಜ ಸೇವಾಯಾಂ' ಎಂಬ ಧಾತುವಿಗೆ 'ಕ್ತಿನ್' ಪ್ರತ್ಯಯವು ಸೇರಿ 'ಭಕ್ತಿ' ಎಂಬ ಪದವು ನಿಷ್ಪನ್ನವಾಗಿದೆ. ಅನನ್ಯತ್ವ, ಅಹೇತುಕತ್ವ ಮತ್ತು ಸರ್ವಸಮರ್ಪಣಭಾವವೇ ಉತ್ತಮಭಕ್ತಿಯ ಲಕ್ಷಣಗಳು. ನಿಷ್ಕಾಮವೂ, ಅನನ್ಯವೂ, ಮತ್ತು ಪರಮಾತ್ಮನಲ್ಲಿ ನಿರತಿಶಯ ಪ್ರೇಮದಿಂದ ತುಂಬಿರುವುದೇ ಉತ್ತಮಭಕ್ತಿ.

ಭಕ್ತಿಯು ಪೂಜೆ ಮೊದಲಾದ ಬಾಹ್ಯಕಾಯಿಕ ಕರ್ಮಗಳಿಂದ ಆರಂಭವಾಗಿ, ಕೀರ್ತನ ಮೊದಲಾದ ವಾಚಿಕ ಕರ್ಮರೂಪ

ದಿಂದ ಬೆಳೆದು, ಸ್ಮರಣ ಮುಂತಾದ ಮಾನಸಿಕ ಕರ್ಮಗಳಿಂದ ಸೂಕ್ಷ್ಮರೂಪ ತಳೆದು ಸರ್ವಸಮರ್ಪಣಭಾವವನ್ನು ನೆಲೆಗೊಳಿಸುವುದರ ಮೂಲಕ ಪರಿಣಾಮಹೊಂದಿ ಅದು ಆತ್ಮನಿವೇದನೆಯಲ್ಲಿ ಪರ್ಯವಸಾನವಾಗುತ್ತದೆ.

## ಭಕ್ತಿಯ ಉಗಮ

ವೈದಿಕ ಸಾಹಿತ್ಯದಲ್ಲಿ ಭಕ್ತಿಗೆ ಸ್ಥಾನವಿಲ್ಲವೆಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಭಕ್ತಿಯ ಉಗಮಕ್ಕೆ ವೇದವೇ ಮೂಲ. ಋಗ್ವೇದದಲ್ಲಿ ಬರುವ,

ಓಂ ತ್ವಂ ಹಿ ನಃ ಪಿತಾ ವಸೋ ತ್ವಂ ಮಾತಾ ಶತಕ್ರತೋ
ಬಭೂವಿಥ। ಅಧಾ ತೇ ಸುಮ್ನಮೀಮಹೆ ॥

(ಋ.೮, ೯೮–೧೧)

ಓಂ ಸಖ್ಯೇತ ಇಂದ್ರ ವಾಜಿನೋ ಮಾ ಭೇಮ ಶವಸಸ್ಪತೇ।
ತ್ವಾಮಭಿಪ್ರಣೋನುಮೋ ಜೇತಾರಮಪರಾಜಿತಮ್॥

(ಋ ೧–೧೧-೨)

ಈ ಮಂತ್ರಗಳಲ್ಲಿ ಭಗವಂತನನ್ನು ತಂದೆಯಂತೆಯೂ ತಾಯಿಯಂತೆಯೂ ಸ್ನೇಹಿತನಂತೆಯೂ ಸಂಬೋಧಿಸಿದೆ.

ಓಂ ಅಜ್ಯೇಷ್ಠಾಸೋ ಅಕನಿಷ್ಠಾಸ
ಏತೇ ಸಂಭ್ರಾತರೋ
ವಾವೃಧುಃ ಸೌಭಗಾಯ।
ಯುವಾ ಪಿತಾ ಸ್ವಪಾ ರುದ್ರ
ಏಷಾಂ ಪೃಶ್ನಿಃ ಸುದಿನಾ ಮರುದ್ಭ್ಯಃ ॥

(ಋ. ೫–೬೦–೫)

ಸರ್ವಸಮತೆಯಿಂದ ಕೂಡಿರುವ ಇಡಿಯ ವಿಶ್ವಪ್ರಜೆಯನ್ನೇ ಸೃಷ್ಟಿಸಿರುವ ಪ್ರಕೃತಿ (ಶಕ್ತಿ) ಮತ್ತು ಪರಮಾತ್ಮ (ಶುದ್ರ) ರು ವಿಶ್ವಪ್ರಜೆಯ ಅನಾದಿ ತಾಯಿತಂದೆಗಳೆಂದು ನಿರ್ದೇಶಿಸಿದೆ.

ಓಂ ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ
ಬಂಧುರ್ಮೇ ಮಾತಾ ಪೃಥಿವೀ ಮಹೀಯಮ್ ।
ಉತ್ತಾನಯೋಶ್ಚಂಪ್ವೊ ಃ ಯೋರ್ನಿರಂತರತ್ರಾ
ಪಿತಾ ದುಹಿತುರ್ಗರ್ಭಮಧಾತ್ ॥

(ಋ. ಮ ೧ ಸೂ ೧೬೪ ಮಂ ೩೩)

ತೇಜೋಮಯವಾದ ಸೃಷ್ಟಿಯನ್ನು ಮಾಡಲೆಳಸಿದ ಪ್ರಭುವೇ ದ್ಯೌಃ. ಅವನೇ ಎಲ್ಲಕ್ಕೂ ತಂದೆ. ಎಲ್ಲರನ್ನೂ ಕರ್ಮಬಂಧನದಲ್ಲಿ ಸಿಕ್ಕಿಸುವವನೂ ಅವನೇ. ವಿಸ್ತಾರವತಿಯೂ ಸರ್ವನಿರ್ಮಾಣಕರ್ತ್ರಿಯೂ ಆದುದು ಪ್ರಕೃತಿ. ಇವರಿಬ್ಬರಿಂದ ಜಗತ್ತಿನ ಉತ್ಪತ್ತಿ. ಸರ್ವೈಶ್ವರ್ಯಪ್ರದಳಾದ ಅವಳೇ ದುಹಿತೃವೆನಿಸಿದವಳು. ಪರಮೇಶ್ವರನೇ ಸರ್ವಾಶ್ರಯನು. ಅಂಥ ಈಶ್ವರೀಯ ಶಕ್ತಿಯಿಂದ ಹುಟ್ಟಿದ ಪ್ರಕೃತಿಯಲ್ಲಿ ಈ ವಿಶ್ವವು ಆವಿರ್ಭವಿಸಿದೆ.

(ಅಥರ್ವ ೯–೧೦–೧೨)

ಇದನ್ನು ಗೀತೆ ಹೀಗೆ ಸಮರ್ಥಿಸಿದೆ.

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥

[ಅ ೧೪–೩–೪]

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥
ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್
ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥
ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥

(ಅ ೧೩,೨೦-೨೨)

ಇವೇ ಮುಂತಾದ ಅವತರಣಗಳು ವೇದಗಳಲ್ಲಿ ಹೇರಳವಾಗಿವೆ. ಭಕ್ತಿಯ ಪರ್ಯಾಯಗಳಾದ ವಾತ್ಸಲ್ಯ ಪ್ರೇಮ ವ್ಯವಹಾರಗಳು ತುಂಬಿವೆ.

ಪೂರ್ವ ಮೀಮಾಂಸಾಶಾಸ್ತ್ರಕಾರರು ಪ್ರತಿಯೊಂದು ವೇದ ಮಂತ್ರಕ್ಕೂ ಯಜ್ಞಾದಿಕ್ರಿಯೆಗಳಲ್ಲಿ ವಿನಿಯೋಗವನ್ನು ಹೇಳಿರುವುದರಿಂದ ಅವುಗಳನ್ನು ಕರ್ಮಕಾಂಡವೆಂದು ಕರೆಯಲು ಕಾರಣವಾಯಿತು. ಆದರೆ ವಾಸ್ತವವಾಗಿ ವೇದದಲ್ಲಿ ಜ್ಞಾನಭಾಗವೂ ತುಂಬಿದೆ. ಪರಮೇಶ್ವರ ವಾಣಿಯೆನಿಸಿರುವ ವೇದಮಂತ್ರಗಳನ್ನು ಮಾಂಗಲ್ಯಕ್ಕಾಗಿ ಕರ್ಮಗಳಲ್ಲಿ ವಿನಿಯೋಗಿಸಲಾಗಿರುವುದೇ ಹೊರತು ವಸ್ತುತಃ ಆ ಮಂತ್ರಗಳು ಕರ್ಮ ಪ್ರತಿಪಾದಕಗಳಲ್ಲ. ಮನೆಯಲ್ಲಿ ಹೆಣ್ಣುಮಕ್ಕಳು ಕಾಳುಗಳನ್ನು ಬೀಸುವಾಗ ಅನೇಕ ಹಾಡುಗಳನ್ನು ಹೇಳುವರು; ಆದರೆ ಆ ಹಾಡುಗಳು ರಾಗಿಬೀಸುವುದನ್ನು ಪ್ರತಿಪಾದಿಸುವುವೆಂದು ಹೇಳಬಹುದೇ? ಎನ್ನುತ್ತಾರೆ ಆಚಾರ್ಯ ವಿನೋಬ ಅವರು. ಆದರೆ.

" ಪೂರ್ವಕಾಂಡಗಳೆನಿಸಿರುವ ವೇದಗಳಲ್ಲಿ ಕರ್ಮಕ್ಕೆ ಹೆಚ್ಚಿನ ಪ್ರಾಧಾನ್ಯವಿದೆ. ಮಾನವನ ಜ್ಞಾನವಿಕಾಸದ ಪ್ರಾರಂಭದೆಸೆಯಲ್ಲಿ ಪಂಚಭೂತಗಳನ್ನು ನೋಡಿ ಭಯಾಶ್ಚರ್ಯಗಳಿಂದ ಕೂಡಿದ ಉದ್ಗಾರಗಳೇ ವೇದಋುಕ್ಕುಗಳು" ಎಂದು ಕೆಲವರು ಹೇಳುವರು. ಈ ಮಾತಿನ ಯಥಾರ್ಥತೆಯನ್ನು ವಿಮರ್ಶಿಸುವುದಕ್ಕೆ ಇದು ಸ್ಥಾನವಲ್ಲದಿದ್ದರೂ ವೇದಗಳ ಬಗ್ಗೆ ಗೀತೆ "ವೇದಗಳು ತ್ರೈಗುಣ್ಯ ವಿಷಯಕವಾದ ಕರ್ಮ ಮಾರ್ಗವನ್ನು ಪ್ರತಿ ವಾದಿಸಿವೆ. ಅರ್ಜುನ, ನೀನು ನಿಸ್ತ್ರೈಗುಣ್ಯನಾಗು," ಎಂದು ಬೋಧಿಸಿದೆ.

ಆದ್ದರಿಂದಲೇ ವೇದ ಧರ್ಮವು Inferior Religion ಎಂದರೆ ಕೆಳದರ್ಜೆಯ ಧರ್ಮ ಪ್ರತಿಪಾದಕವೆಂದು ಹೇಳುತ್ತಾರೆ. ತಿಳುವಿನ ತಳವನ್ನು ಕಾಣಬೇಕಾದರೆ ಜ್ಞಾನ ಕಾಂಡಗಳೆನಿಸಿರುವ ವೇದಾಂತ ಎಂದರೆ ವೇದಗಳ ಕಡೆಯ ಭಾಗಗಳೆನಿಸಿರುವ ಉಪನಿಷತ್ತುಗಳ ಹೊಲಬನ್ನು ಹೋಗಬೇಕು ಎಂಬ ವಾದವೂ ಇದೆ.

ಮುಖ್ಯವಾದ ಉಪನಿಷತ್ತುಗಳೆನಿಸಿರುವ ಈಶಾದಿ ಹತ್ತು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಭಕ್ತಿಯ ಕುರುಹುಗಳು ಕಂಡು ಬಂದರೂ ನೇರವಾಗಿ ಅವು ಭಕ್ತಿಮಾರ್ಗವನ್ನು ಪ್ರಸ್ತಾಪಿಸಿಲ್ಲ. ಆದರೆ ಅಲ್ಲಿಂದೀಚಿನದೆನಿಸಿರುವ ಶ್ವೇತಾಶ್ವತರೋಪನಿಷತ್ತಿನಲ್ಲಿ ಒಂದು ಸಲ ಮಾತ್ರ 'ಭಕ್ತಿ' ಪದವು ಉಪಲಬ್ಧವಾಗು

ತ್ತದೆ. ಉಪನಿಷತ್ ವಾಙ್ಮಯದಲ್ಲಿ ಮೊಟ್ಟಮೊದಲನೆಯದಾಗಿ ಭಕ್ತಿಪದವು ಪ್ರಯೋಗಿಸಲ್ಪಟ್ಟಿರುವುದು ಇಲ್ಲಿಯೇ.

"ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ"
[ಶ್ವೇ. ೬-೨೩.]

'ಗುರುದೈವಗಳಲ್ಲಿ ಅನನ್ಯಭಕ್ತಿಯನ್ನಿಡಬೇಕು' ಎಂದು ಹೇಳಿದೆ. ಶ್ವೇತಾಶ್ವತರಕ್ಕಿಂತ ಕೊಂಚ ಈಚಿನದೆನಿಸುವ ಕೈವಲ್ಯೋಪನಿಷತ್ತಿನಲ್ಲಿ 'ಭಕ್ತಿ' ಯ ವಿಷಯವು ಮತ್ತಷ್ಟು ವಿಸ್ತೃತವಾಗಿದೆ.

"ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" [೧-೨]

ಬ್ರಹ್ಮಸಾಧನ ಸಾಮಗ್ರಿಯಲ್ಲಿ ಭಕ್ತಿಯು ಮಧ್ಯಮಣಿಯಂತೆ ಸೇರಿರುವುದು ಭಕ್ತಿಯ ಶ್ರೇಷ್ಠತೆಯನ್ನು ಸೂಚಿಸುತ್ತದೆ.

ಭಕ್ತಿಯ ಸ್ವರೂಪವನ್ನು ಇಂದು ನಾವು ಯಾವ ಅರ್ಥದಲ್ಲಿ ಬಳಸುತ್ತಿರುವೆವೊ ಉಪನಿಷತ್ಕಾಲದಲ್ಲಿ ಅದಕ್ಕೆ ಅಷ್ಟೊಂದು ಪ್ರಾಧಾನ್ಯವಿದ್ದಂತೆ ಕಾಣುವುದಿಲ್ಲ. ಶ್ವೇತಾಶ್ವತರದಿಂದೀಚೆಗೆ ಭಕ್ತಿಯ ಪ್ರಭಾವವು ಭಾರತೀಯ ತಾತ್ವಿಕ ಸಾಹಿತ್ಯದ ಮೇಲೆ ಹೆಚ್ಚಾಗಿ ಬಿದ್ದಿದೆ. ಶ್ವೇತಾಶ್ವತರೋಪನಿಷತ್ತಿಗೆ ಹೆಚ್ಚು ಸಂಬಂಧಿಸಿದುದೆನಿಸಿರುವ ಭಗವದ್ಗೀತೆಯಲ್ಲಿ ಭಕ್ತಿಬೀಜವು ಚೆನ್ನಾಗಿ ವಿಕಾಸವಾಗಿದೆ.

ಗೀತೆ ಯೋಗಸಮನ್ವಯದ ಹೊತ್ತಗೆ. ಇಲ್ಲಿ ಭಕ್ತಿಯನ್ನು ಯೋಗವೆಂದೇ ಕರೆಯಲಾಗಿದೆ. 'ಯಾರು ತಪಸ್ವಿಗಳಲ್ಲವೋ

ಭಕ್ತರಲ್ಲವೋ, ಅವರಿಗೆ ಜ್ಞಾನೋಪದೇಶ ಮಾಡಲಾಗದು.'
(೧೮-೬೭)

"ಈ ಪರಮ ಗೂಢವಾದ ಜ್ಞಾನವನ್ನು ನನ್ನ ಭಕ್ತರಿಗೆ ಕೊಡುವವನು ನನ್ನಲ್ಲಿ ಪರಮ ಭಕ್ತಿಗೈಯುವುದರಿಂದ ನಿಸ್ಸಂದೇಹ ವಾಗಿ ನನ್ನನ್ನೇ ಹೊಂದುವನು." (೧೮-೬೮) ಎಂದು ಗೀತೆ ಸಾರಿದೆ. ಸುಮಾರು ಏಳುನೂರು ಶ್ಲೋಕಗಳ ಭಗವದ್ಗೀತೆ ಯಂತಹ ಮಹಾ ಗ್ರಂಥದಲ್ಲಿ ಭಕ್ತಿಪ್ರತಿಪಾದಕವಾದ ಆರು ಅಧ್ಯಾಯಗಳು ಮಧ್ಯದಲ್ಲಿ ಸಮಾವೇಶಗೊಂಡಿವೆ. ಅದರ ಲ್ಲಿಯೂ ಕೇವಲ ಇಪ್ಪತ್ತು ಶ್ಲೋಕಗಳ ಭಕ್ತಿಯೋಗದ ಪುಟ್ಟ ಅಧ್ಯಾಯವು ಅತ್ಯಂತ ಮಹತ್ವವಾದುದು.

ಕರ್ಮಕೌಶಲ ಎಂದರೆ ನಿಷ್ಕಾಮಕರ್ಮ. "ಯೋಗಃ ಕರ್ಮಸು ಕೌಶಲಂ" ಸಮತ್ವವೇ ಯೋಗ. "ಸಮತ್ವಂ ಯೋಗ ಉಚ್ಯತೆ" ಎಂಬ ಸಾಧನಮಾರ್ಗಗಳನ್ನು ಹೇಳಿ, ಅವೆರಡೂ ನೆಲೆಯೂರುವುದಕ್ಕಾಗಿಯೇ ಭಗವಂತನು ತನ್ನ ವಿಭೂತಿಗಳನ್ನು ಹೇಳಿ ವಿಶ್ವರೂಪುತೋರಿದುದು. ಒಂಬತ್ತನೆಯ ಅಧ್ಯಾಯದಲ್ಲಿ ಅನನ್ಯಭಕ್ತಿಯನ್ನು 'ಗುಹ್ಯತಮ' "ರಾಜಗುಹ್ಯ" ಎಂಬ ಪದ ಗಳಿಂದ ನಿರ್ದೇಶಿಸಲಾಗಿದೆ. ಭಗವಂತನು "ಅನನ್ಯತೆಯಿಂದ ನನ್ನನ್ನು ಉಪಾಸಿಸಿದ ಪಕ್ಷದಲ್ಲಿ ಅವರ ಯೋಗಕ್ಷೇಮ ನನ್ನದು." (೯-೨೨) 'ಪತ್ರ, ಪುಷ್ಪ, ಫಲ ಯಾವುದನ್ನಾದರೂ ಭಕ್ತಿ ಯಿಂದಿತ್ತರೆ ಸಾಕು.' (೯-೨೬) "ಇಂದ್ರಿಯಗಳ ಮೂಲಕ ಸೇವಿ ಸುವುದನ್ನೆಲ್ಲಾ ನನಗೆ ಅರ್ಪಿಸು" (೯-೨೭) ಇತ್ಯಾದಿ ವರ್ಣನೆ

ಗಳು ಬಹು ಸುಂದರವಾಗಿವೆ. "ನನ್ನನ್ನು ತಿಳಿಯುವುದಕ್ಕೂ, ದರ್ಶನ ಮಾಡುವುದಕ್ಕೂ ಮತ್ತು ನನ್ನಲ್ಲಿ ಪ್ರವೇಶಿಸುವುದಕ್ಕೂ ಅನನ್ಯಭಕ್ತಿಯೇ ಸಾಧನ." "ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರ ಗೊಳಿಸುವುದಕ್ಕೆ ಏಕಾಗ್ರತೆಬೇಕು. ಈ ಏಕಾಗ್ರತೆಯು ಅಭ್ಯಾಸ ದಿಂದ ಸಿದ್ಧಿಸುತ್ತದೆ. ಈ ಅಭ್ಯಾಸಕ್ಕೆ ಜ್ಞಾನಮಾರ್ಗವೂ, ಅದಕ್ಕೆ ಧ್ಯಾನ ಮತ್ತು ಕರ್ಮಫಲತ್ಯಾಗರೂಪವಾದ ಭಕ್ತಿಯೂ ಕಾರಣ ವಾಗಿದೆಯಲ್ಲದೆ ಭಕ್ತಿಯಿಂದ ಚಿರಶಾಂತಿಯು ಲಭಿಸುವುದೆಂದು ಸ್ಪಷ್ಟಪಡಿಸಲಾಗಿದೆ. ಇಲ್ಲಿ ಭಕ್ತಿಮಾರ್ಗದ ಸಾರಸರ್ವಸ್ವವೂ ಸಂಗ್ರಹಿಸಲ್ಪಟ್ಟಿದೆ. (೧೨,೨-೧೨)

ಶ್ವೇತಾಶ್ವತರ ಮತ್ತು ಭಗವದ್ಗೀತೆಗಳ ಪ್ರಭಾವದ ಮೇಲೆ ನಾರದ ಮತ್ತು ಶಾಂಡಿಲ್ಯ ಋಷಿಗಳು ಭಕ್ತಿಸೂತ್ರಗಳನ್ನು ರಚಿಸಿರುತ್ತಾರೆ.

"ಸಾ ಪರಾನುರಕ್ತಿರೀಶ್ವರೇ" (ಶಾ. ಸು. ೧. ೧. ೨)

ಎಂದರೆ 'ಪರಮೇಶ್ವರನಲ್ಲಿಟ್ಟಿರುವ ಪರಾನು ರಾಗವೇಭಕ್ತಿ' ಎಂದು ಹೇಳಿ ಭಕ್ತಿಯು ಭಗವಂತನ ಅನುಗ್ರಹಕ್ಕೆ ಮುಖ್ಯ ಸಾಧನವೆಂಬ ವಿಷಯವನ್ನು ಒತ್ತಿ ಹೇಳಿದೆ.

## ಭಕ್ತಿಯ ಮೂಲ ಆಗಮಗಳು.

ಹೀಗೆ ಭಕ್ತಿಯ ಮೂಲವನ್ನು ವಿಂಗಡಿಸುತ್ತ ಹೋದಂತೆಲ್ಲ ಅನೇಕ ವಿಚಾರಗಳು ಮುಂದೆ ನಿಲ್ಲುವುವು. ಭಾರತ ಇತಿಹಾಸ ವನ್ನು ಶೋಧಿಸಿರುವ ಅನೇಕ ಪಂಡಿತರ ಅಭಿಪ್ರಾಯದಂತೆ ವಿಶೇ

ಷತಃ ಭಕ್ತಿಯು ಆಗಮ ಸಂಸ್ಕೃತಿಯ ಚಿಹ್ನೆಯೆಂದು ದೃಢಪಟ್ಟಿದೆ. ವೇದಕಾಲಕ್ಕಿಂತ ಹಿಂದಿನದೆನಿಸಿರುವ ದ್ರಾವಿಡ ಸಂಸ್ಕೃತಿಯಲ್ಲಿ ಭಕ್ತಿಗೆ ಅಗ್ರಸ್ಥಾನವಿತ್ತೆಂದು ವ್ಯಕ್ತವಾಗಿದೆ.

ಮೊಹೆಂಜೋದಾರೋ ಕಣಿವೆಯಲ್ಲಿ ದೊರಕಿರುವ ಅವಶೇಷಗಳ ಮೇಲಿಂದ ವೇದಪೂರ್ವಜರಾದ ಭಾರತನಿವಾಸಿಗಳು ಶಿವಾರ್ಚಕರಾಗಿದ್ದರೆಂದೂ, ಅವರು ದೇವರ ಪೂಜೆ, ಧ್ಯಾನಾದಿಗಳಲ್ಲಿ ನಿರತರಾಗಿದ್ದರೆಂದೂ ತಿಳಿದು ಬಂದಿದೆ. ಆದುದರಿಂದಲೇ ಮೊದಮೊದಲು ಭಾರತವನ್ನು ಪ್ರವೇಶಿಸಿದ ಅಗ್ನಿಯ ಉಪಾಸಕರಾದ ಆರ್ಯರು ಭಕ್ತಿಗೆ ಅಷ್ಟು ಮಹತ್ವಕೊಡದೆ ಕೇವಲ ಯಜ್ಞಯಾಗಾದಿ ಕರ್ಮಗಳಲ್ಲಿ ನಿರತರಾಗಿದ್ದರೆಂದೂ, ಸಹಸ್ರಾರು ವರ್ಷಗಳಕಾಲ ನಡೆದ ಆರ್ಯದ್ರಾವಿಡ ಜನಾಂಗಗಳ ಹೋರಾಟದ ಫಲವಾಗಿ ವೇದಗಳ 'ರುದ್ರ'ನು ದ್ರಾವಿಡ (ಆಗಮಿಕ) 'ಶಿವ'ನೊಡನೆ ಐಕ್ಯವಾದನೆಂದೂ, ಆ ತರುವಾಯ ಸಂಕಲಿತವಾದ ಯಜುರ್ವೇದ, ತೈತ್ತಿರೀಯ ಬ್ರಾಹ್ಮಣೋಪನಿಷತ್ತುಗಳಲ್ಲಿ 'ರುದ್ರ-ಶಿವ'ರ ಸಂಬಂಧವೇರ್ಪಟ್ಟಿತೆಂದೂ ಹೇಳಲಾಗಿದೆ. ಮುಂದೆ 'ಶ್ವೇತಾಶ್ವತರ' ಮುಂತಾದ ಶೈವೋಪನಿಷತ್ತುಗಳಲ್ಲಿಯೂ ಅನಂತರ ವೇದಾಗಮ ಸಾಹಿತ್ಯ ಸಂಸ್ಕೃತಿಗಳ ಸಾರಸರ್ವಸ್ವವಾಗಿರುವ ಭಗವದ್ಗೀತೆಯಲ್ಲಿಯೂ ಭಕ್ತಿಯೋಗವು ಪುಷ್ಕಳವಾಗಿ ಪಲ್ಲವಿಸಿ ಕುಸುಮಿಸಿ ಫಲಿಸಿ ಅಧ್ಯಾತ್ಮಕಲ್ಪತೆಯಂತೆ ಪ್ರಕಾಶಿಸಿದೆ. ಇದಕ್ಕೆ ಉದಾಹರಣೆಯಾಗಿ ಶೈವಾಗಮಗಳ ಅನೇಕ ಶ್ಲೋಕಗಳು ಭಗವದ್ಗೀತೆಯಲ್ಲಿ ಸಮಾವೇಶವಾಗಿರುವುದನ್ನು ಅನುಬಂಧದಲ್ಲಿ ಅವಲೋಕಿಸಬಹುದಾಗಿದೆ.

## ವೈದಿಕ ಮತಗಳ ಮೇಲೆ ಭಕ್ತಿಯ ಪ್ರಭಾವ.

ಉಪನಿಷತ್ತು ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳ ಆಧಾರದ ಮೇಲೆ ಸ್ಥಾಪಿತವಾಗಿರುವ ವೈದಿಕ ಮತಗಳಿಗೆ ಭಕ್ತಿಯೇ ಬಲವಾದ ತಳಹದಿ. ಆದರಿಂಲೇ ಅದ್ವೈತ ಮತಸ್ಥಾಪಕರಾದ ಶ್ರೀ ಶಂಕರಾಚಾರ್ಯರು.

"ಮೋಕ್ಷಕಾರಣಸಾಮಗ್ರ್ಯಾಂ ಭಕ್ತಿರೇವ ಗರೀಯಸೀ"

ಮೋಕ್ಷೋಪಾಯ ಸಾಮಗ್ರಿಯಲ್ಲಿ ಭಕ್ತಿಯೇ ಶ್ರೇಷ್ಠವಾದುದು ಎಂದು ಹೇಳಿದ್ದಾರೆ. ವಿಶಿಷ್ಟಾದ್ವೈತ ಮತದಲ್ಲಿ "ನಿರತಿಶಯಾನಂದಪ್ರಿಯಾನನ್ಯಪ್ರಯೋಜನಸಕಲೇತರವೈತೃಷ್ಣ್ಯವಜ್ಞಾನವಿಶೇಷಃ ಭಕ್ತಿಃ" ಎಂದರೆ 'ಪರಮಾನಂದಪ್ರದಾಯಕವಾದ ಜ್ಞಾನವಿಶೇಷವೇ ಭಕ್ತಿ' ಈ ಮತದಲ್ಲಿ ಅತಿಮುಖ್ಯವಾಗಿರುವ 'ಭರನ್ಯಾಸ' ಪದ್ಧತಿ ಎಂದರೆ ಸರ್ವಾರ್ಪಣ ಭಾವವು ಭಕ್ತಿಯ ಪರಾಕಾಷ್ಠದೆಶೆಯೇ ಆಗಿದೆ. ದ್ವೈತ ಮತದಲ್ಲಂತೂ ಉಪಾಸ್ಯನಾದ ಭಗವಂತನಲ್ಲಿ ಉಪಾಸಕನು ನಿರಂತರವೂ (ಮುಕ್ತಿದೆಶೆಯಲ್ಲಿಕೂಡ) ಭಕ್ತಿಯಿಂದ ಧ್ಯಾನಪೂಜಾದಿಗಳನ್ನು ಸಲ್ಲಿಸಲೇಬೇಕಾಗಿದೆ.

ಆಗಮ ಸಂಸ್ಕೃತಿಯ ಕವಲುಗಳಂತಿರುವ ಶೈವ-ಪಾಂಚರಾತ್ರ-ವೈಖಾನಸಾಗಮಗಳು ಭಕ್ತಿಯ ಆಧಾರದಮೇಲೆಯೇ ನಿಂತಿವೆ. ಶೈವದ ಪ್ರಭೇದವೆನಿಸಿರುವ ವೀರಶೈವ ಮತದಲ್ಲಂತೂ ಭಕ್ತಿಯು ಪರಶಿವ ಶಕ್ತಿಯ ಪರಿಣಾಮವೇ ಆಗಿದೆ.

"ಸರ್ವತ್ರ ಭಕ್ತಿರೇಕೈವ ಭಕ್ತಾನಾಂ ಮುಕ್ತಿಸಾಧನಂ"

(ಪಾರ. ಪ. ೧೯: ೬೧)

ಭಕ್ತರ ಆತ್ಮೋದ್ಧಾರಕ್ಕೆ ಭಕ್ತಿಯೊಂದೆ ಮುಖ್ಯ ಸಾಧನ.

" ಏಷಾಭಕ್ತಿಮತಾಂ ಭಕ್ತಿಃ ಪೂಜಾಸಲ್ಲಕ್ಷಣಾಮಮ ॥೬೭॥
" ಭಕ್ತ್ಯಾ ಸಂತಾರಯೇತ್ಸರ್ವಮಾತ್ಮಾನಂ ವಶಮಾತ್ಮನಃ।
ಭಿತ್ವಾಚರಾಚರಂ ವಿಶ್ವಂ ಶಿವೋ ಭೂತ್ವಾಸುಖೀ ಭವೇತ್ ॥೬೪॥
(ಪಾರ. ಪ. ೧೯)

ಭಕ್ತಿಯಿಂದ ಎಲ್ಲವನ್ನೂ ತನ್ನ ವಶಮಾಡಿಕೊಂಡು ಶಿವನಾಗಿ ಸುಖಿಸಬಹುದು. ಎಂದು ಮುಂತಾಗಿ ಭಕ್ತಿಯ ಪ್ರಾಶಸ್ತ್ಯದ ಬಗ್ಗೆ ಉಲ್ಲೇಖಗಳು ಹೇರಳವಾಗಿ ದೊರೆಯುತ್ತವೆ.

## ಭಕ್ತಿಯ ಪ್ರಭೇದಗಳು.

ಶ್ರವಣಂ ಕೀರ್ತನಂ ಶಂಭೋಃಸ್ಮರಣಂ ಪಾದಸೇವನಂ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ॥
(ಸಿದ್ಧಾಂತ ಶಿಖಾಮಣಿ. ಪ. ೯)

ಭಗವಂತನ ವರ್ಣನವನ್ನು ಕೇಳುವುದು. ಸ್ತುತಿಸುವುದು, ನೆನೆವುದು, ಪಾದಸೇವೆ, ಪೂಜೆ, ವಂದನ, ದಾಸ್ಯ, ಗೆಳೆತನ, ಮತ್ತು ಆತ್ಮಾರ್ಪಣ ಎಂದು ಭಕ್ತಿಯು ಒಂಬತ್ತು ವಿಧ.

ಭಕ್ತಿಯು ಬಾಹ್ಯ ಮತ್ತು ಆಂತರ ಎಂದು ಎರಡು ವಿಧ. ಪ್ರಸಾದ (ಪ್ರಸನ್ನತೆ) ಮತ್ತು ಭಕ್ತಿಗಳಿಗೆ ಬೀಜಾಂಕುರನ್ಯಾಯದಂತೆ ಸಂಬಂಧವಿದೆ. ಭಕ್ತಿಯು ಕಾಯಿಕ, ವಾಚಿಕ ಮತ್ತು ಮಾನಸಿಕವೆಂದು ಮೂರುವಿಧ. ಭಗವಚ್ಚಿಂತನ ಮಾನಸಿಕ ಭಗವನ್ಮಂತ್ರಜಪವು ವಾಚಿಕ, ಪೂಜಾದಿಗಳು ಕಾಯಿಕ ಭಕ್ತಿಯೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ.

ವೀರಶೈವಸಿದ್ಧಾಂತದಲ್ಲಿ ಭಕ್ತಿಯು ಮುಕ್ತಿಮಾರ್ಗದ ಅಡಿಗಲ್ಲು. ಭಕ್ತಿ ಶಬ್ದದ ನಿರ್ವಚನವು ಇಲ್ಲಿ ಬಹು ಸ್ವಾರಸ್ಯವಾಗಿ ಹೇಳಿದೆ. "ಪೂಜ್ಯೇಷ್ವನುರಾಗೋ ಭಕ್ತಿಃ" ಎಂದು ಕೆಲವರು ಹೇಳುತ್ತಾರೆ. ಪ್ರಸಿದ್ಧ ಆಲಂಕಾರಿಕನಾದ ಮಮ್ಮಟನು "ದೇವಾದಿವಿಷಯಾ ವ್ಯಭಿಚಾರೀ ತಥಾಂಚಿತಃ ಭಾವಃ" ಎಂದು ಭಾವವಿಶೇಷವನ್ನೇ ಭಕ್ತಿಯೆಂದಿದ್ದಾನೆ. ಆದರೆ ಶಿವಾದ್ವೈತ ಪ್ರವೀಣನಾದ ಮೊಗ್ಗೆ ಮಾಯಿದೇವನು ಭಕ್ತಿಗೆ ಮಹೋನ್ನತಸ್ಥಾನವಿತ್ತಿದ್ದಾನೆ.

## ಭಕ್ತಿಯು ಪಂಚಮ ಪುರುಷಾರ್ಥ.

ಪರಶಿವನಲ್ಲಿ ಅವಿನಾಭಾವದಿಂದಿದ್ದು ಜಗತ್ಸೃಷ್ಟಿಗೆ ಮೂಲವಾದ ಶಕ್ತಿಯೇ ಭಕ್ತಿಯಾಗಿ ಪರಿಣಮಿಸುತ್ತದೆ. ಶಿವಾಂಶಭೂತನಾದ ಜೀವನ ಉದ್ಧಾರಕ್ಕಾಗಿ ಶಕ್ತಿಯೇ ಮಾತೃಸ್ವರೂಪಿಣಿಯಾಗಿ ಭಕ್ತಿಯೆನಿಸಿತು. ಆದುದರಿಂದ ಭಕ್ತಿಯು ಪಂಚಮ ಪುರುಷಾರ್ಥವೆನಿಸಿದೆ. ಇದರಿಂದ ಸಾಧಕನು ಶಕ್ತಿಗಿಂತ ಹೆಚ್ಚಾಗಿ ಭಕ್ತಿಯನ್ನೇ ಆಶ್ರಯಿಸುತ್ತಾನೆ. ಪ್ರಪಂಚಸೃಷ್ಟಿಗೆ ಮೂಲಕಾರಣವಾದ ಶಕ್ತಿಯು ಪ್ರಜ್ವಲಿಸುವ ಅಗ್ನಿಯೆಂದು ಭಾವಿಸಿದರೆ ಭಕ್ತಿಯು ಅದೇ ಬೆಂಕಿಯಿಂದ ಹೊತ್ತಿಸಿದ ಮನೆಯನ್ನು ಬೆಳಗುವ ಸಣ್ಣದೀಪದಂತೆ, ಅಂದರೆ ಮಹೇಶ್ವರನಲ್ಲಿನ ಶಕ್ತಿಯೇ ಭಕ್ತನ ಉದ್ಧಾರಕ್ಕಾಗಿ ಭಕ್ತಿಯಾಯಿತು. ದೀಪವು ಕಿರಿದಾಗಿದ್ದರೂ ಅದರಲ್ಲಿ ಬೆಂಕಿಯಲ್ಲಿರುವ ಹೊಗೆ–ಧಗೆಗಳು ಇಲ್ಲದೆ ಅದು ನಿರ್ಮಲ ಪ್ರಕಾಶದಿಂದ ಬೆಳಗುವಂತೆ ಭಕ್ತಿಯು ಶಕ್ತಿಯಲ್ಲಿರುವ ಪ್ರವೃತ್ತಿ ರೂಪ ವಾಸನೆಗಳಿಂದ ದೂರವಾಗಿದೆ.

## ಶಕ್ತಿ ಭಕ್ತಿಗಳಿಗಿರುವ ವ್ಯತ್ಯಾಸ

ಶಕ್ತಿಯು ಪ್ರವೃತ್ತಿರೂಪ, ಭಕ್ತಿ ನಿವೃತ್ತಿರೂಪ; ಶಕ್ತಿಯಿಂದ ಜಗತ್ಸೃಷ್ಟಿ, ಭಕ್ತಿಯಿಂದ ಪ್ರಪಂಚ ಲಯ; ಶಕ್ತಿ ವೈಚಿತ್ರ್ಯದಿಂದ ರೂಪಾವಿರ್ಭಾವ, ಭಕ್ತಿಯಿಂದ ರೂಪರಾಹಿತ್ಯ; ಜಗತ್ತಿನ ವೃದ್ಧಿಯ ಅಪೇಕ್ಷೆ ಶಕ್ತಿಗೆ, ಜಗತ್ತಿನ ಲಯಾಪೇಕ್ಷೆ ಭಕ್ತಿಗೆ; ಶಕ್ತಿ ಅಧೋಮುಖಿ, ಭಕ್ತಿ ಊರ್ಧ್ವಮುಖಿ; ಶಕ್ತಿ ಮಾಯೆ, ಭಕ್ತಿ ನಿರ್ಮಾಯೆ; ಶಕ್ತಿಯು ಉಪಾಸ್ಯ, ಭಕ್ತಿ ಉಪಾಸಕ. ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಶಕ್ತಿಗಿಂತ ಭಕ್ತಿಯೇ ಶ್ರೇಷ್ಠ. ಯುಕ್ತಿ ಮತ್ತು ಪ್ರಮಾಣ ಯಾವ ದೃಷ್ಟಿಯಿಂದ ನೋಡಿದರೂ ಕೂಡ ಶಕ್ತಿಗಿಂತ ಭಕ್ತಿಗೆ ಪ್ರಾಶಸ್ತ್ಯ ಹೆಚ್ಚು.

## ಭಕ್ತಿಯು ಸಮನ್ವಯ ಯೋಗ.

ಭಕ್ತಿಯು ಜೀವ (ಸಾಧಕ)ನ ಸ್ವಭಾವಕ್ಕೆ ಸೇರಿದ್ದು. ಇದರಲ್ಲಿ ಪ್ರೇಮ, ಜ್ಞಾನ, ಕ್ರಿಯೆಗಳ ಸಮನ್ವಯವು ಕಂಡು ಬರುತ್ತದೆ. ಜ್ಞಾನ, ಕ್ರಿಯೆಗಳು ಭಕ್ತಿಯಲ್ಲಿಯೇ ಅಂತರ್ಗತವಾಗುತ್ತವೆ. ಉದಾಹರಣೆಗೆ ಸತ್ಯವನ್ನು ಭಾವಿಸುವುದು ಭಕ್ತಿ. ಅದನ್ನು ನಿಚ್ಚಳವಾಗಿ ಕಾಣುವುದು ಜ್ಞಾನ. ಸತ್ಯದಂತೆ ನಡೆವುದು ಕ್ರಿಯೆ. ಭಕ್ತಿಯು ಅನುಭವ ಸಿದ್ಧಾಂತದ ಮೂಲ. ಬಂಧ-ಮೋಕ್ಷಗಳು ಶಿವ-ಶಕ್ತಿಗಳ ಸಂಕೋಚ-ವಿಕಾಸಭಾವಗಳು. ಅಂಥ ಸಂಕೋಚವಿಕಾಸಗಳ ಪರಿವೆಯಿಲ್ಲದೆ ಸರ್ವತೋಮುಖವಾಗಿ ಬೆಳಗುವ ಶಿವಮಯ ಪ್ರಕಾಶವೇ ಭಕ್ತಿ.

## ಕರ್ಮ ಜ್ಞಾನ ಮತ್ತು ಭಕ್ತಿಗಳಿಗಿರುವ ತಾರತಮ್ಯ

ಅಹಂ ಕರ್ತಾ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ।
ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೇ॥
(ಅ. ಸೂ. ೮.)

"ನಾನೇ ಎಲ್ಲಾ ಧರ್ಮಾಧರ್ಮ ಕರ್ಮಗಳಿಗೂ ಕರ್ತೃ" ಎಂಬ ಅಭಿಮಾನದಿಂದ ಕರ್ಮಕಾಂಡ ಕೂಡಿದೆ.

ನಾಹಂ ಕರ್ತಾಸ್ಯ ಕರ್ತೃತ್ವಂ ನೈವ ಸಾಕ್ಷೀ ಸ್ವಭಾವತಃ।
ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೇ॥
(ಅನು. ಸೂ. ೮)

'ನಾನು ಕರ್ತೃವಲ್ಲ. ಕರ್ತೃತ್ವವೂ ನನಗಿಲ್ಲ, ಸ್ವಭಾವತಃ ನಾನು ಸಾಕ್ಷಿಯೂ ಅಲ್ಲ" ಎಂಬ ಅಭಿಮಾನದಿಂದ ಕೂಡಿ ಮದು ಜ್ಞಾನಕಾಂಡ.

ನಾಹಂ ಕರ್ತಾ ನ ಸಾಕ್ಷೀ ಚ ಶಿವ ಏವೇತಿ ಕರ್ಮಣೋಃ।
ದ್ವಯಾಭಿಮಾನರಾಹಿತ್ಯಂ ಭಕ್ತಿಕಾಂಡೋಽಯಮುಚ್ಯತೇ॥
(ಅನು. ೮)

ಯಾವ ಕರ್ಮಕ್ಕೂ ನಾನು ಕರ್ತೃವಲ್ಲ, ಸಾಕ್ಷಿಯೂ ಅಲ್ಲ. ಎಲ್ಲಕ್ಕೂ ಭಗವಂತನೇ ಕರ್ತೃ ಮತ್ತು ಸಾಕ್ಷಿ ಎಂಬ ಅಭಿಮಾನ ರಾಹಿತ್ಯವೇ ಭಕ್ತಿಕಾಂಡದ ವೈಶಿಷ್ಟ್ಯ. ಈ ವಿಷಯದಲ್ಲಿ ಒಂದು ಸುಂದರ ಉದಾಹರಣೆ ಇದೆ.

ಶುಕ್ತಿಃ ಕರ್ಮಪದಂ, ಸರೋರುಹದಲಂ ಜ್ಞಾನಂಪದಂ,
ಭಾಕ್ತಿಕಂ।
ತಪ್ತಾಯೋಃ ಘನಮೇಘ ಸಂಸೃತಿಪಯೋ ಬಿಂದು ಸ್ಥಿತ
ಸ್ತತ್ಕ್ರಮಾತ್॥
ಸಾಫಲ್ಯಂ, ವಿಫಲತ್ವಮಾಕೃತಿತಯಾ, ಪ್ರಾಯೇಣ
ನಾಶಂ ಗತೋ।
ನಾಮ್ನಾಸ್ಯೈವ ಶಿವಾತ್ಮಿಕಾಂ ಪರತರಾಂ ಭಕ್ತಿಂ
ಕಿಮಾಚಕ್ಷ್ಮಹೇ॥

ಕರ್ಮ, ಜ್ಞಾನ ಭಕ್ತಿಗಳು ಕ್ರಮವಾಗಿ ಮುತ್ತಿನ ಚಿಪ್ಪು, ಕಮಲದಲ ಮತ್ತು ಕಾಯ್ದ ಕಬ್ಬಿಣವಿದ್ದಂತೆ. ಮಳೆ ಬಿದ್ದಾಗ ಮುತ್ತಿನ ಚಿಪ್ಪಿನಲ್ಲಿ ಬಿದ್ದ ನೀರು ಸಫಲ ಎಂದರೆ ಮುತ್ತಾಗುತ್ತದೆ. ಕಮಲದಲದಲ್ಲಿ ಬಿದ್ದ ನೀರು ದಳಗಳ ಆಕಾರ ತಳೆಯುತ್ತದೆ. ಆದರೂ ನಿರ್ಲಿಪ್ತವಾಗಿರುವುದರಿಂದ ಅದು ವಿಫಲವಾಗುತ್ತದೆ. ಕಾಯ್ದ ಕಬ್ಬಿಣದಲ್ಲಿ ಬಿದ್ದ ನೀರು ಪ್ರಾಯಃ ನಾಶವಾಗುತ್ತದೆ. ಅದರಂತೆ ಕರ್ಮ ಮಾರ್ಗದಲ್ಲಿ ಮಾನವನಿಗೆ ಸ್ವರ್ಗಾದಿಫಲಗಳು ಲಭಿಸುತ್ತವೆ. ಜ್ಞಾನ ಮಾರ್ಗದಿಂದ ನಿರ್ಲಿಪ್ತತ್ವವು ಲಭಿಸುತ್ತದೆ. ಭಕ್ತಿಯಿಂದ ತಾನು ಎಂಬ ಅಭಿಮಾನವಳಿದು ಅನನ್ಯಭಾವ ವುದಿಸಿ ತನ್ಮಯತ್ವವು ಸಿದ್ಧಿಸುತ್ತದೆ.

**ಭಕ್ತಿಮಾರ್ಗ ವಿಶ್ವವ್ಯಾಪಿ:**—ಹೀಗೆ ಭಕ್ತಿಮಾರ್ಗವು ಕ್ರಮಕ್ರಮವಾಗಿ ವಿಕಾಸವಾಗುತ್ತಾ ಇಂದು ಇಡೀ ವಿಶ್ವವನ್ನೇ ವ್ಯಾಪಿಸಿದೆ. ಜಗತ್ತಿನ ಬಹು ಭಾಗವನ್ನು ವ್ಯಾಪಿಸಿರುವ ಕ್ರೈಸ್ತ, ಮಹಮ್ಮದೀಯ ಮತಗಳು ಭಕ್ತಿಯ ಆಧಾರದ ಮೇಲೆ ನಿಂತಿವೆ.

ಭಾರತದಲ್ಲಿ ಕರ್ಮ ಮತ್ತು ಜ್ಞಾನ ಪ್ರಧಾನವಾದ ಎಲ್ಲ ಮತಗಳೂ ಆಗಮ ಸಂಸ್ಕೃತಿಗೆ ತಲೆಬಾಗಿ ಭಕ್ತಿಮಾರ್ಗವನ್ನು ಅವಲಂಬಿಸಿವೆ. ಆಸೇತು ಸೀತಾಚಲದ ವರೆಗೂ ಇಂದು ಆಗಮೋಕ್ತವಾದ ಪೂಜಾವಿಧಾನವೇ ಆಚರಣೆಯಲ್ಲಿದೆ. ದೇವಾಲಯದ ನಿರ್ಮಾಣಕ್ಕೆ ಆಧಾರವಾದ ಶಿಲ್ಪಶಾಸ್ತ್ರಕ್ಕೆ ಆಗಮ ಸಂಸ್ಕೃತಿಯೇ ಮೂಲ.

**ಭಕ್ತಿಯ ವಿವಿಧರೂಪಗಳು:**—ಭಗವಂತನನ್ನು ತಂದೆ, ತಾಯಿ, ಮತ್ತು ಮಗುವಿನಂತೆ ಆರಾಧಿಸುವುದು ವಾತ್ಸಲ್ಯ ಭಕ್ತಿ. ಕ್ರೈಸ್ತ ಮಹಮ್ಮದೀಯ ಮತಗಳಲ್ಲಿ ಏಸು, ಪೈಗಂಬರ ಪ್ರವಾದಿಗಳಿಗೆ ದೇವರು ತಂದೆ ಮತ್ತು ಪ್ರಭುವೆನಿಸಿದ್ದಾನೆ. ಶ್ರೀರಾಮಕೃಷ್ಣ ಪರಮಹಂಸರಿಗೆ ದೇವರು ತಾಯಿ, ಬಾಲಕೃಷ್ಣನ ಪೂಜೆ ವಾತ್ಸಲ್ಯ ಭಕ್ತಿಗೆ ನಿದರ್ಶನ. ಪರಮಾತ್ಮನನ್ನು ಪತಿಯೆಂದು ಭಾವಿಸುವುದು 'ಮಧುರ ಭಕ್ತಿ' ರಾಧಾ—ಕೃಷ್ಣರ ಉಪಾಸನೆ, ಭಾಗವತದ ಗೋಪಿಯರ ಭಕ್ತಿ ಇದಕ್ಕೆ ಉದಾಹರಣೆ. ಗೀತ ಗೋವಿಂದ ಕಾವ್ಯವು 'ಮಧುರಭಕ್ತಿಯ " ರಸ ಸಂಹಿತೆ! ವೀರಶೈವರಲ್ಲಿರುವ 'ಶರಣಸತಿ—ಲಿಂಗಪತಿ' ಭಾವವೂ ಸಹ ಇದೇ ಜಾತಿಯದು. ಸೂಫೀಪಂಥದ ಸಾಧುಗಳಲ್ಲಿಯೂ ಇದೇ ವಿಧವಾದ ಭಕ್ತಿಯನ್ನು ಕಾಣಬಹುದು. ವೈಷ್ಣವದಾಸರು ಕೆಲವರು 'ಮಧುರಭಕ್ತಿ'ಯ ಅನೇಕ ಹಾಡುಗಳನ್ನು ಹಾಡಿದ್ದಾರೆ.

## ಭಕ್ತಿಪಂಥದ ಮಹಾತ್ಮರು.

ಏಸುಕ್ರಿಸ್ತನು ಸ್ವಯಂ ಪರಮಭಕ್ತನು. ಪ್ರಾಯಶಃ ಕ್ರಿಸ್ತ ಮತದ ಸಾಧುಗಳೆಲ್ಲ ಭಕ್ತರೆ. ಸೆಂಟ್‌ಪಾಲ್ ಸೆಂಟ್

ಫ್ರಾನ್ಸಿಸ್, ಸೆಂಟ್ ಝೇವಿಯರ್, ಸೆಂಟ್ ಜಾನ್ ಆಫ್ ದಿ ಕ್ರಾಸ್ ಮುಂತಾದವರೆಲ್ಲ ಪರಮ ಭಕ್ತರು. ಫ್ರಾನ್ಸಿನ ಅಗಸ್ಟಾಯಿನನು ಭಕ್ತಿಮಾರ್ಗದ ಸಾರವನ್ನೇ ಪ್ರತಿಪಾದಿಸಿದ್ದಾನೆ. ಹಾಫಿಜ್ ಉಮರ್ ಖಯಾಮ್, ಸರ್ ಮದಿನ ಮುಂತಾದವರೆಲ್ಲ ಭಕ್ತಿ ಪಂಥವನ್ನೇ ಹಿಡಿದು ಕೃತಕೃತ್ಯರಾಗಿದ್ದಾರೆ. ವಿಜ್ಞಾನೇಶ್ವರ, ರಾಮದಾಸ, ತುಕಾರಾಮ, ಪುರಂದರದಾಸ, ಕನಕದಾಸ, ವಿಜಯ ದಾಸ, ಜಗನ್ನಾಥ ದಾಸ, ಮತ್ತು ಆಧುನಿಕ ಕವಿ ಸಾಮ್ರಾಟ್ ರವೀಂದ್ರನಾಥ ಟಾಗೂರ್, ಮಹಾತ್ಮಾ ಗಾಂಧೀಜಿ ಮುಂತಾದವ ರೆಲ್ಲ ಭಕ್ತಶಿರೋಮಣಿಗಳೆನಿಸಿದ್ದಾರೆ. ಆದ್ದರಿಂದ ಪರಮಾತ್ಮನ ಒಲುಮೆಗೆ ಭಕ್ತಿಮಾರ್ಗವುಎಲ್ಲಮಾರ್ಗಗಳಿಗಿಂತ ಶ್ರೇಷ್ಠವಾದುದು. ಸುಲಭವಾದ ಇಂಥ ಸಾಧನ ಮಾರ್ಗವನ್ನು ಅವಲಂಬಿಸಿ ಜನ್ಮ ಸಾರ್ಥಕಮಾಡಿಕೊಳ್ಳಬೇಕು. ಪರಮಾತ್ಮನ ಭಕ್ತಿಯ ಹೊರತು ಆತ್ಮಶಾಂತಿಗೆ ಮತ್ತೊಂದು ದಿವ್ಯೌಷಧವಿಲ್ಲ.

## ಭಕ್ತಿಯು ಹೇಡಿಯ ಸಾಧನವಲ್ಲ.

"ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂಬ ಉಪನಿಷ ದುಕ್ತಿಯು 'ಬಲಹೀನನು ಆತ್ಮಶಕ್ತಿಯನ್ನು ಗಳಿಸಲಾರನು' ಎಂದು ಸಾರುತ್ತದೆ. ಸಾಮಾನ್ಯವಾಗಿ ಭಕ್ತರು ಸಾಧು ಸ್ವಭಾವ ದವರು. ಅಂದ ಮಾತ್ರದಿಂದ ಅವರು ದುರ್ಬಲ ಹೃದಯರಲ್ಲ. ಕರ್ತವ್ಯವೊದಗಿದಾಗ ನಿಜವಾದ ಭಕ್ತನೇ ಆತ್ಮಾರ್ಪಣಮಾಡಲು ಸಮರ್ಥನೆಂಬುದು ಭಾರತೀಯ ಧರ್ಮವೀರರ ಚರಿತ್ರೆಗಳಲ್ಲಿ ಸಿದ್ಧವಾಗಿದೆ. ಆಧುನಿಕ ವಿಜ್ಞಾನ ಯುಗದಲ್ಲಿಯೂ ಸಹ

ಸೂರ್ಯಾಸ್ತವೇ ಇಲ್ಲವೆಂದು ಹೆಸರಾಂತ ಬ್ರಿಟಿಷ್ ಚಕ್ರಾಧಿಪತ್ಯ ವನ್ನು ಕೇವಲ ಅಹಿಂಸಾತ್ಮಕವಾದ ಸತ್ಯಾಗ್ರಹ ಸಮರದಿಂದ ಜೈಸಿದ ಮಹಾತ್ಮಾ ಗಾಂಧೀಜಿಯವರ ಅದ್ಭುತ ಪವಾಡ ಭಕ್ತಿ ವಿಜಯಕ್ಕೆ ಅಮರ ನಿದರ್ಶನ.

ಭಕ್ತನು ರಾಜಸ ತಾಮಸರಂತೆ ದೌರ್ಜನ್ಯಕ್ಕೆ ಕೈ ಹಾಕ ಲಾರ. ಅವನು ಸಾತ್ತ್ವಿಕವೀರ, ಧರ್ಮಕ್ಕಾಗಿ, ಕರ್ತವ್ಯಕ್ಕಾಗಿ, ನಿಷ್ಕಾಮದಿಂದ ಸುಖದುಃಖಗಳಲ್ಲಿ ಸಮತೆಯನ್ನು ಸಾಧಸಿ ಪರ ಮಾತ್ಮನ ಮೇಲೆ ಭಾರಹಾಕಿ ಕರ್ತವ್ಯಾಭಿಮುಖನಾಗುತ್ತಾನೆ. ಭಗವದ್ಗೀತೆಯಲ್ಲಿ ಮೊದಲಿನಿಂದ ಕಡೆಯವರೆಗೆ ಪ್ರತಿಪಾದಿತ ವಾಗಿರುವ ವಿಷಯವು ಇದೇ.

ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

(೧೮–೬೫)

ಎಂಬ ಉಪದೇಶವನ್ನು ಭಗವಂತನು ಮೇಲಿಂದ ಮೇಲೆ ಒತ್ತಿ ಒತ್ತಿ ಉಪದೇಶಿಸಿದ್ದಾನೆ. ಪರಮಾತ್ಮನಲ್ಲಿ ಭಕ್ತಿಯಿಲ್ಲ ದವನಿಗೆ ತ್ಯಾಗ, ಸಮತೆ, ಕಾರ್ಯಕೌಶಲ ಮತ್ತು ನಿಷ್ಕಾಮ ಬುದ್ಧಿಗಳು ಉದಿಸಲಾರವು. ಸಾತ್ವಿಕ ಶಕ್ತಿ ಅತ್ಯಂತ ಬಲಿಷ್ಠ ವಾದುದು. ರಾಜಸ ತಾಮಸಗಳು ನಶ್ವರ ಮತ್ತು ದುರ್ಬಲ ವಾದವು. ಮಾನವನು ತನ್ನಲ್ಲಿರುವ ಆಸುರೀ ಶಕ್ತಿಗಳನ್ನು ನಾಶ ಮಾಡಿ ಸಾತ್ವಿಕ ವೀರನಾಗಿ ಭಗವತ್ ಕೃಪೆಗೆ ಪಾತ್ರನಾಗ ಬೇಕೆಂಬುದೇ ಭಗವದ್ಗೀತೆಯ ಅಂತರ್ವಾಣಿ.

ಅಂತೆಯೇ ಗೀತೆ; ಅಂತರ್ವಾಣಿ. ಅದು ಪ್ರತಿ ಮಾನವನ ಹೃದಯವಾಣಿಯಾಗಿ ಪ್ರತಿ ಧ್ವನಿಸಲಿ!

ಸತ್ಯಂ ಶಿವಂ ಸುಂದರಮ್.

ಓಂ ತತ್ ಸತ್.



# ಶ್ರೀಮದ್ಭಗವದ್ಗೀತಾ

## ಪ್ರಥಮೋಽಧ್ಯಾಯಃ

ಧೃತರಾಷ್ಟ್ರ ಉವಾಚ

ಶ್ಲೋ॥ ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ।
ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥

ಸಂಜಯ ಉವಾಚ

ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ।
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥

ದುರ್ಯೋಧನ ಉವಾಚ

ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯಮಹತೀಂಚಮೂಮ್।
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥

ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾ ಯುಧಿ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥

ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್।
ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ
ಯುಧಾಮನ್ಯುಶ್ಚವಿಕ್ರಾನ್ತ ಉತ್ತಮೌಜಾಶ್ಚ ವೀರ್ಯವಾನ್।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ

ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥

ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂ ಜಯಃ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ ॥೮॥

ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ ।
ನಾನಾ ಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥

ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥

ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥೧೧॥

ಸಂಜಯ ಉವಾಚ
ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹ ನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥

ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥೧೩॥

ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥

ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಸ್ಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥

ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥೧೯॥

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥೨೦॥

ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।

ಅರ್ಜುನ ಉವಾಚ

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥

ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥೨೨॥

ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥

ಸಂಜಯ ಉವಾಚ

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥

ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥

ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ॥

ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್ ॥
ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।

ಅರ್ಜುನ ಉವಾಚ

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥

ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥

ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ।
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥೩೧॥

ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ॥

ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಸ್ಸುಖಾನಿ ಚ।
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ॥

ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ।
ಮಾತುಲಾಃ ಶ್ವಶುರಾಃ ಪೌತ್ರಾಃ ಶಾಲಾಃ ಸಂಬಂಧಿನಸ್ತಥಾ॥

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ।
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥೩೫॥

ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥೩೬॥

ತಸ್ಮಾನ್ನಾರ್ಹಾವಯಂಹಂತುಂ ಧಾರ್ತರಾಷ್ಟ್ರಾನ್ಸ್ವಬಾಂಧವಾನ್।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥೩೭॥

ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ।
ಕುಲಕ್ಷಯ ಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್॥

ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್।
ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥೩೯॥

ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥೪೦॥

ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥೪೨॥

ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥

ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥೪೪॥

ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ ।
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥೪೫॥

ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥೪೬॥

ಸಂಜಯ ಉವಾಚ
ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥

## ಅಥ ದ್ವಿತೀಯೋಽಧ್ಯಾಯಃ

ಸಂಜಯ ಉವಾಚ
ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥೧॥

ಶ್ರೀ ಭಗವಾನುವಾಚ

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥೨॥

ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ ತ್ವಯ್ಯುಪಪದ್ಯತೇ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥೩॥

ಅರ್ಜುನ ಉವಾಚ

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ।
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥೪॥

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ।
ಹತ್ವಾರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥೫॥

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ।
ಯಾನೇವ ಹತ್ವಾ ನ ಜಿಜೀವಿಷಾಮ-
ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥೬॥

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮ ಸಮ್ಮೂಢಚೇತಾಃ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್।

ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿಚಾಧಿಪತ್ಯಮ್ ॥೮॥

ಸಂಜಯ ಉವಾಚ

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥

ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥೧೦॥

ಶ್ರೀ ಭಗವಾನುವಾಚ

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥೧೧॥

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥

ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥

ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥

ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।
ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥೧೭॥

ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥೧೮॥

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯॥

ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್।
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥೨೧॥

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ।
ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥೨೩॥

ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥೨೪॥

ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥೨೫॥

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್।
ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥೨೬॥

ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥
ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ।
ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥

ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ
ಮಾಶ್ಚರ್ಯವದ್ವದತಿ ತಥೈವ ಚಾನ್ಯಃ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂವೇದ ನ ಚೈವ ಕಶ್ಚಿತ್ ॥೨೯॥

ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥

ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥

ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್।
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥೩೪॥

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ।
ಯೇಷಾಂಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್

ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥

ಹತೋವಾಪ್ರಾಪ್ಸ್ಯಸಿ ಸ್ವರ್ಗಂಜಿತ್ವಾ ವಾಭೋಕ್ಷ್ಯಸೇಮಹೀಮ್।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮ ವಾಪ್ಸ್ಯಸಿ ॥

ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂ ಶೃಣು!
ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ।
ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್॥

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರು ನಂದನ!
ಬಹು ಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥

ಕಾಮಾತ್ಮಾನಃ ಸ್ವರ್ಗಪರಾ ಜನ್ಮ ಕರ್ಮಫಲಪ್ರದಾಮ್।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥

ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್॥

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೪೬॥

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ।
ಮಾ ಕರ್ಮ ಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ॥

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥

ದೂರೇಣಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲ ಹೇತವಃ ॥೪೯॥

ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ।
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥

ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ।
ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ।
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥೫೩॥

ಅರ್ಜುನ ಉವಾಚ

ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥೫೪॥

ಶ್ರೀ ಭಗವಾನುವಾಚ

ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥೫೫॥

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥೫೬॥

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಮ್।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥

ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥

ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥೬೦॥

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇ ಕಾಮಃಕಾಮಾತ್ಕ್ರೋಧೋಽಭಿಜಾಯತೇ

ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥೬೩॥

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥೬೪॥

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ।
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥೬೫॥

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥೬೬॥

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥೬೭॥

ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ॥
ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್।
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮ ಕಾಮೀ ॥೭೦॥
ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ
ನಿರ್ಮಮೋ ನಿರಂಹಕಾರಃ ಸ ಶಾಂತಿಮಧಿಗಚ್ಛತಿ ॥೭೧॥
ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ।
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥೭೨॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಸಾಂಖ್ಯಯೋಗೋನಾಮ ದ್ವಿತಿಯೋಽಧ್ಯಾಯಃ

---

## ಅಥ ತೃತೀಯೋಽಧ್ಯಾಯಃ

ಅರ್ಜುನ ಉವಾಚ
ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ।
ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥

ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹ ಯಸೀವ ಮೇ।
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್॥

ಶ್ರೀ ಭಗವಾನುವಾಚ
ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ।
ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥೪॥

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫॥

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥೭॥

ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋಹ್ಯಕರ್ಮಣಃ ।
ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥೮॥

ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥೯॥

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್ ॥೧೦॥

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥೧೧॥

ಇಷ್ಟಾನ್ಭೋಗಾನ್ ಹಿವೋದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥

ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥

ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ।
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥೨೦॥

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೨೧॥

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥

ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥೨೮॥

ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥
ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥೩೦॥

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥
ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥೩೨॥
ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥
ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥೩೪॥
ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥

ಅರ್ಜುನ ಉವಾಚ
ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ।
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥

ಶ್ರೀ ಭಗವಾನುವಾಚ
ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥

ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥

ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥೩೯॥

ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನ ನಾಶನಮ್ ॥೪೧॥

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥೪೨॥

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ

———

# ಅಥ ಚತುರ್ಥೋಽಧ್ಯಾಯಃ

ಶ್ರೀ ಭಗವಾನುವಾಚ
ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥

ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥

ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥

ಅರ್ಜುನ ಉವಾಚ
ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥

ಶ್ರೀ ಭಗವಾನುವಾಚ
ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥

ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥೭॥

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥

ಯೇ ಯಥಾ ಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಮ್
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ॥

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥೧೨॥

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್॥

ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ।
ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥೧೪॥

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ।
ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್॥

ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್
ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ।
ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥೧೭॥

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್॥

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ॥೧೯॥

ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ।
ಕರ್ಮಣ್ಯಭಿಪ್ರವೃತ್ತೋಽಪಿ ನೈವಕಿಂಚಿತ್ಕರೋತಿ ಸಃ ॥೨೦॥

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತ ಸರ್ವಪರಿಗ್ರಹಃ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೨೧॥

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ।
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥೨೨॥

ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮಸಮಾಧಿನಾ ॥೨೪॥

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ।
ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥೨೬॥

ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥೨೭॥

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ।
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ॥

ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ।
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತ ಕಲ್ಮಷಾಃ ॥೩೦॥

ಯಜ್ಞ ಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಮ್।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ॥

ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ।
ಕರ್ಮಜಾನ್ ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ॥

ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥೩೩॥

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥೩೪॥

ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ।
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥೩೫॥

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪ ಕೃತ್ತಮಃ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥೩೬॥

ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥೩೭॥

ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ।
ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥೩೮॥

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥೩೯॥

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ।
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ॥

ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್।
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥೪೧॥

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ।
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥೪೨॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ

---

# ಅಥ ಪಂಚಮೋಽಧ್ಯಾಯಃ

ಅರ್ಜುನ ಉವಾಚ

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್॥

ಶ್ರೀ ಭಗವಾನುವಾಚ

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ।
ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ॥

ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ।
ನಿರ್ದ್ವಂದ್ವೋ ಹಿಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ

ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥೪॥

ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ।
ಏಕಂ ಸಾಂಖ್ಯಂ ಚ ಯೋಗಂ ಯಃ ಪಶ್ಯತಿ ಸ ಪಶ್ಯತಿ ॥೫॥

ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ।
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥೬॥

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥೭॥

ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥

ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥೧೦॥

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽತ್ಮಶುದ್ಧಯೇ ॥

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಂ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥೧೨॥

ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥೧೩॥

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥

ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥೧೭॥

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥೧೮॥

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ॥
ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಂ
ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥೨೦॥

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥೨೧॥
ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥೨೨॥

ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ॥

ಯೋಽಂತಸ್ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣ ಕಲ್ಮಷಾಃ।
ಛಿನ್ನದ್ವೈಧಾ ಯತಾತ್ಮಾನಃ ಸರ್ವ ಭೂತಹಿತೇ ರತಾಃ ॥೨೫॥

ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್।
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥
ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥೨೭॥
ಯತೇಂದ್ರಿಯ ಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥
ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕರ್ಮಸಂನ್ಯಾಸಯೋಗೋನಾಮ
ಪಂಚಮೋಽಧ್ಯಾಯಃ.

---

# ಅಥ ಷಷ್ಠೋಽಧ್ಯಾಯಃ

ಶ್ರೀ ಭಗವಾನುವಾಚ

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥೧॥

ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥೨॥

ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥

ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ !
ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥೪॥

ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥೫॥

ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥

ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣ ಸುಖದುಃಖೇಷು ತಥಾ ಮಾನಾಪಮಾನಯೋಃ ॥೭॥

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥೮॥

ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯ ಬಂಧುಷು।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥೯॥

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥

ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।
ನಾತ್ಯುಚ್ಛ್ರಿತಂ ನಾತಿ ನೀಚಂ ಚೈಲಾಜಿನಕುಶೋತ್ತರಮ್ ॥೧೧॥
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮ ವಿಶುದ್ಧಯೇ ॥೧೨॥

ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿ ವ್ರತೇ ಸ್ಥಿತಃ।
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥

ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥೧೫॥

ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ।
ನಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥೧೬॥

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥

ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ॥

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗ ಸೇವಯಾ।
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ॥

ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ।
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥೨೪॥

ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೨೫॥

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥೨೬॥

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥೨೭॥

ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥೨೮॥

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥೨೯॥

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥

ಅರ್ಜುನ ಉವಾಚ
ಯೋಽಯಂಯೋಗಸ್ತ್ವಯಾಪ್ರೋಕ್ತಃಸಾಮ್ಯೇನ ಮಧುಸೂದನ ।
ಏತಸ್ಯಾಹಂ ನ ಪಶ್ಯಾಮಿ ಚಂಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥

ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥೩೪॥

ಶ್ರೀ ಭಗವಾನುವಾಚ
ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥೩೫॥

ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥

ಅರ್ಜುನ ಉವಾಚ
ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥

ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥

ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥೩೯॥

ಶ್ರೀ ಭಗವಾನುವಾಚ
ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ।
ನಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥

ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಃ ಸಮಾಃ।
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ॥

ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್।
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥೪೨॥

ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್।
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥೪೩॥

ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ।
ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿ ವರ್ತತೇ ॥೪೪॥

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥೪೫॥

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ॥

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ।
ಶ್ರದ್ಧಾವಾನ್ ಭಜತೇ ಯೋ ಮಾಂಸ ಮೇ ಯುಕ್ತತಮೋ ಮತಃ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಅಭ್ಯಾಸಯೋಗೋನಾಮ
ಷಷ್ಠೋಽಧ್ಯಾಯಃ

———

# ಅಥ ಸಪ್ತಮೋಽಧ್ಯಾಯಃ

ಶ್ರೀ ಭಗವಾನುವಾಚ
ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥

ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ ॥

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥

ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥೪॥

ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥೬॥
ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥೭॥

ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥೮॥

ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥೯॥

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥೧೦॥

ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥

ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥೧೨॥

ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।
ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥೧೫॥

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥೧೬॥

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥

ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥

ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥೧೯॥

ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।
ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥೨೧॥

ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।
ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ॥

ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ।
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥

ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ।
ಮೂಢೋಽಯಂ ನಾಭಿಜಾನಾತಿಲೋಕೋಮಾಮಜಮವ್ಯಯಂ॥

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥೨೬॥

ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ।
ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ ॥೨೭॥

ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್।
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ॥

ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥

ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನವಿಜ್ಞಾನಯೋಗೋನಾಮ
ಸಪ್ತಮೋಽಧ್ಯಾಯಃ

---

